# ಚಿರಪರಿಚಿತರು

•

ಲೇಖಕ:
ಕೈಂತಜೆ ಗೋವಿಂದ ಭಟ್ಟ

•

1955

ಬೆಲೆ ಆರಾಣೆ.

# ಮುನ್ನುಡಿ

ಈ ಚಿಕ್ಕ ಪುಸ್ತಕದಲ್ಲಿರುವ ಏಳು ಪ್ರಬಂಧಗಳು ಸಾಮಾನ್ಯವಾಗಿ ಅಣಕ ಬರಹ (Skit)ದ ಜಾತಿಗೆ ಸೇರಿದವುಗಳು. ಈ ಜಾತಿಯ ಲೇಖನವು ಕಥಾತ್ಮಕವೂ ಅಲ್ಲ; ವರ್ಣನಾತ್ಮಕವೂ ಅಲ್ಲ; ಬರಿಯ ಹರಟೆಯೂ ಅಲ್ಲ. ಸಮಾಜದ ಮಧ್ಯದಲ್ಲಿ ಗೋಚರಿಸಬಹುದಾದ ವೈಲಕ್ಷಣ್ಯಗಳನ್ನು ಎತ್ತಿ, ಸಾಂಕೇತಿಕ ವ್ಯಕ್ತಿಗಳನ್ನು ಕಲ್ಪಿಸಿ, ಅವುಗಳ ಲಘು ಚಿತ್ರಣದಿಂದ ಆ ವೈಲಕ್ಷಣ್ಯಗಳನ್ನು ಮೂರ್ತಿಮತ್ತಾಗಿ ಕಾಣಿಸುವುದು ಈ ಬಗೆಯ ಲೇಖನದ ಉದ್ದೇಶ. ಇದು ರೇಖಾ ಚಿತ್ರ; ವರ್ಣ ಚಿತ್ರವಲ್ಲ. ವಸ್ತುವಿನ ಅಥವಾ ವ್ಯಕ್ತಿಯ ಆಮೂಲಾಗ್ರ ಕಥನವಾಗಲಿ, ಸ್ವಭಾವ ನಿರೂಪಣವಾಗಲಿ ಇದರಲ್ಲಿ ಬೇಕಾಗಿಲ್ಲ. ಆಪಾತ ಸುಂದರವಾದ ಒಂದೆರಡು ಘಟನೆಗಳು; ಅವುಗಳ ಹೊಂದಿಕೆಯಲ್ಲಿ ಪ್ರಸ್ತುತ ವ್ಯಕ್ತಿ ಹೇಗೆ ನಡೆದನೆಂಬುದರ ಲಘು ಹಾಸ್ಯಮಯ ನಿರೂಪಣೆ; ಇಷ್ಟರಿಂದ ನಾವು ಕಂಡು ಕೇಳಿ ಇದ್ದಿರಬಹುದಾದ ಯಾವುದಾದರೊಂದು 'ಜನದ' ಸ್ಮರಣೆಯುಂಟಾಗಿ ನಮ್ಮ ಮುಖದಲ್ಲಿ ನಗು ಮೂಡಬೇಕು; ಎದೆ ಅರಳಬೇಕು! ಹರಿತವಾದ ಮೊನೆಮಾತುಗಳು; ಚುರುಕಿನ ಶೈಲಿ; ಅರ್ಥಸ್ಫುಟತೆಯುಳ್ಳ ಭಾಷೆ; ಒಂದಿಷ್ಟು ಉತ್ಪ್ರೇಕ್ಷೆ-ಅತಿಶಯೋಕ್ತಿ-ವಕ್ರೋಕ್ತಿಗಳು...... ಈ ಫಲ ಪ್ರಾಪ್ತಿಗೆ ಸಹಾಯಕವಾಗಿವೆ.

ಶ್ರೀ। ಕೆ. ಗೋವಿಂದ ಭಟ್ಟರ ಲೇಖನಿಯು ಈ ಉದ್ದೇಶ ಸಾಧನೆಯ ದಾರಿಯಲ್ಲಿ ಮುಂದೆ ಸಾಗಿದೆ; ಎಂದು ವಾಚಕರು ಮನಗಾಣಬಹುದು. 'ನಮ್ಮ ಭಟ್ಟರು'; 'ಪಂಡಿತ ರಾಮಕೃಷ್ಣ

ದಗಲ್ ಬಾಜರು'; ಪ್ರಕೃತಿಚಿಕಿತ್ಸಾ-ಪ್ರಿಯ 'ರಂಗಪ್ಪಯ್ಯ'ನವರು; ಮೊದಲಾದ ವ್ಯಕ್ತಿಗಳು ಕೆಲವರನ್ನಾದರೂ ಕೆರಳಿಸಬಹುದು; ಹಲವರನ್ನು ನಗಿಸಬಹುದು; ಇನ್ನು ಕೆಲವರು ತಮ್ಮ ಸ್ವಭಾವದ ಸ್ವಲ್ಪಾಂಶವನ್ನು ಅವರಲ್ಲಿ ಕಂಡು ತಮ್ಮ ಗುಣದ ಓರೆಕೋರೆಗಳನ್ನು ಅರಿತು ಸಹೃದತೆಯ ಪೂರ್ಣ ಸುಖಾನುಭವವನ್ನು ಪಡೆಯಬಹುದು.

ಸಾಹಿತ್ಯದ ವಿವಿಧಾಂಗಗಳಲ್ಲಿ ಅದು ಮೇಲು; ಇದು ಕೀಳೆಂಬ ವಾದಕ್ಕೆ ಎಡೆಯಿಲ್ಲ. ಉತ್ತಮವಾದುದೆಲ್ಲ ಮೇಲೆ; ಉತ್ತಮವಾದುದರಲ್ಲೆಲ್ಲ ಕಲಾವತಾರ ಇದ್ದೇ ಇದೆ. ನಮ್ಮ ತರುಣ ಮಿತ್ರರಾದ ಶ್ರೀ। ಭಟ್ಟರು ಪ್ರಥಮವಾಗಿ ಪ್ರಕಟಿಸುವ ಕೃತಿ ಇದಲ್ಲ; ಚಿಕ್ಕ ಕತೆಗಳನ್ನು ಬರೆದು ಕೈ ನುರಿಯಿಸಿಕೊಂಡಿದ್ದಾರೆ. ಈ ಬಗೆಯ ಬರವಣಿಗೆಗೆ ಹೊಸಬರಾದರೂ ಯಶಸ್ಸನ್ನು ಪಡೆಯುವ ಲಕ್ಷಣಗಳನ್ನು ಇಲ್ಲಿ ತೋರಿಸಿದ್ದಾರೆ.

ಮಂಗಳೂರು,<br>೧೬-೧೧-'೫೫

**ಕಡೆಂಗೋಡ್ಲು ಶಂಕರ ಭಟ್ಟ.**

# ನಿವೇದನ

ಕನ್ನಡ ಸಾಹಿತ್ಯದಲ್ಲಿ ಈ ಮಾದರಿಯ ಪ್ರಬಂಧಗಳು ಹೊಸತಲ್ಲದಿದ್ದರೂ ಹೇರಳವಾಗಿ ಬಂದಿಲ್ಲ. ಇಂಗ್ಲೀಷಿನಲ್ಲಿ 'ಚಾರ್ಲ್ಸ್ ಲೇಂಬ್' ಮೊದಲಾದವರ ಈ ತೆರನಾದ ಪ್ರಬಂಧಗಳು ಜಗದ್ವಿಖ್ಯಾತವಾಗಿವೆ. ಕನ್ನಡ ಜನತೆ ಈ ಹೊಸ ಪ್ರಯೋಗವನ್ನು ಸ್ವಾಗತಿಸುವರಾಗಿ ನಂಬುತ್ತೇನೆ.

ಇದರಲ್ಲಿರುವ ಪ್ರಬಂಧಗಳಲ್ಲಿ 'ಕಪ್ಪಣಾಚಾರ್ಯ' ಎಂಬುದನ್ನುಳಿದು ಬಾಕಿ ಎಲ್ಲಾ ಈ ಮೊದಲೆ ಬೇರೆ-ಬೇರೆ ಪತ್ರಿಕೆಗಳಲ್ಲಿ ಪ್ರಕಟವಾಗಿವೆ. 'ನಮ್ಮ ಭಟ್ಟ', 'ಪಿಯಚ್‌ಡಿ. ಡೊಂಕ', 'ನನ್ನ ಗೆಳೆಯ ತಿರುಪತಿ', 'ರಾಮಕೃಷ್ಣ ದಗಲ್‌ಬಾಜ್', 'ದೊಡ್ಡಮನೆ ವೆಂಕಪ್ಪ', 'ರಂಗಪ್ಪಯ್ಯ', ಇವು ಕ್ರಮವಾಗಿ 'ಕರ್ಮವೀರ', 'ಜಯಂತಿ', 'ಸೇವಾ', 'ಸುಬೋಧ', 'ಜನಪ್ರಗತಿ', 'ರಾಷ್ಟ್ರಬಂಧು' ಪತ್ರಿಕೆಗಳಲ್ಲಿ ಪ್ರಕಟವಾಗಿವೆ. ಇವುಗಳನ್ನು ಪ್ರಕಟಿಸಿದ ಪತ್ರಿಕೆಗಳ ಸಂಪಾದಕರಿಗೆ ನಾನು ಋಣಿ.

ಹಿರಿಯ ಸಾಹಿತಿಗಳಲ್ಲಿ ಒಬ್ಬರಾದ ಶ್ರೀ। ಕಡೆಂಗೋಡ್ಲು ಶಂಕರ ಭಟ್ಟರು ಪ್ರೀತಿ ಇಟ್ಟು ಅಮೂಲ್ಯವಾದ ಮುನ್ನುಡಿಯನ್ನು ಬರೆದು ಕೊಟ್ಟಿದ್ದಾರೆ. ಅವರ ಸೌಜನ್ಯಕ್ಕೆ ನಾನು ಕೃತಜ್ಞನು.

ಗೆಳೆಯರಾದ ಶ್ರೀ। ಬಿ. ಈಶ್ವರ ಭಟ್ಟರು ಮುದ್ರಣ ದೋಷ ಗಳನ್ನು ತಿದ್ದಲು ತುಂಬ ಸಹಕರಿಸಿದ್ದಾರೆ. ಅವರಿಗೂ, ಇದನ್ನು ಮುದ್ದಾಗಿ ಮುದ್ರಿಸಿ ಕೊಟ್ಟ 'ಉದಯ ಪ್ರಿಂಟರಿ ಎಂಡ್ ಪಬ್ಲಿಕೇಷನ್ಸ್ ಲಿಮಿಟೆಡ್' ಇದರ ಮ್ಯಾನೇಜರಿಗೂ ನನ್ನ ವಂದನೆಗಳು.

ಮಂಗಳೂರು,
೧೬–೧೧–'೫೫

ಇತಿ,
**ಕೈಂತಜೆ ಗೋವಿಂದ ಭಟ್ಟ.**

# ೧. ನಮ್ಮ ಭಟ್ಟ

ನಮ್ಮ ಭಟ್ಟ ದೊಡ್ಡ ಆಫೀಸರು. ಎಲ್ಲರಿಂದಲೂ ಒಳ್ಳೆಯ ಕೆಲಸಗಾರನೆಂದು ಹೇಳಿಸಿಕೊಂಡವನು. ಬೇರೆಯವ ರಲ್ಲಿ ಐವತ್ತು ಫೈಲುಗಳು ನೋಡಲು ಬಾಕಿ ಇದ್ದರೂ, ಬೇರೆ ಯವರು ಕೆಲಸ ಮುಗಿಸಲು ರಾತ್ರಿ ಎಂಟು ಘಂಟೆಯ ತನಕ ಸೆಕೆಯಲ್ಲಿ ಒದ್ದಾಡಬೇಕಿದ್ದರೂ ಇವನ ಕೆಲಸವೆಲ್ಲ ನಾಲ್ಕು ಘಂಟೆಗೇ 'ಕ್ಲೋಸು'. ಅದೂ ಸರಿಯಾಗಿ, ಚೊಕ್ಕವಾಗಿ. ಅವನಿಗೆ ಅದೊಂದು ಜಾಡ್ಯ ಎಲ್ಲಿಂದ ಬಂತೋ ತಿಳಿಯದು, ಆಫೀಸಿನಿಂದ ಬಿಟ್ಟೇಳುವಾಗಲೇ ತೂಕಡಿಕೆ. ಐದು ಘಂಟೆಗೆ ಮನೆಗೆ ಬಂದನೊ ಇಲ್ಲವೊ ನಿದ್ದೆಗೆ ಸುರುಮಾಡು ತ್ತಾನೆ. ಊಟಕ್ಕೆ ಮಡದಿ ಎಬ್ಬಿಸುವ ತನಕವೂ ನಿದ್ದೆ. ಊಟ ಮಾಡಿದ ಕೂಡಲೆ ಕೈ ತೊಳೆಯಲೂ ಸರಿಯಾಗಿ ಸಮ ಯವಿಲ್ಲ ಪುನಃ ಕಣ್ಣು ಮುಚ್ಚಿಕೊಳ್ಳುತ್ತಾನೆ. ಬಳಿಕ ಬೆಳಿಗ್ಗೆ ಹತ್ತೂವರೆ ತನಕ ನಿದ್ದೆ. ಆ ಮೇಲೆ ಅರ್ಧ ಘಂಟೆ ಯಲ್ಲಿ ಸ್ನಾನ, ಊಟ, ಆಫೀಸಿಗೆ ಹೋಗುವುದು ಎಲ್ಲವೂ ಮುಗಿಯಬೇಕು. ಹೇಗೆ ಮುಗಿಸುತ್ತಾನೊ ಅವನಿಗೇ ಗೊತ್ತು. ಹನ್ನೊಂದು ಘಂಟೆ ಹೊಡೆಯುವಾಗ ಆಫೀಸಿನಲ್ಲಿ ಭಟ್ಟ ಹಾಜರಿ. ಅವನು ಕೆಲಸಕ್ಕೆ ಹೋಗುವ ಭರ ನೋಡಬೇಕು! ಎದುರಿಗೆ ಯಾವನಾದರೂ ಸಿಕ್ಕಿದರೆ ನೂರು ಗಜ ಅತ್ತ ಉರುಳಿ ಬೀಳಬೇಕು! ನನಗೆ ಯಾವಾಗಲೂ ಹೆದರಿಕೆ, ಅವನು ನಡೆಯುವಾಗ ಎಲ್ಲಿ ಒಮ್ಮೆ ಆರು ಉಪ್ಪರಿಗೆಯ ಮಲ್ಲಾರಾವು

ಜವಳಿ ವ್ಯಾಪಾರಿಯ ಅಂಗಡಿ ಆದುರಿ ಕುಸಿದು ಬೀಳುತ್ತದೊ-ಎಂದು. ಕೆಲವು ದಿನಗಳ ಹಿಂದೆ "ಒಬ್ಸರ್‌ವೇಟರಿ"ಯವರು ಭೂಕಂಪವಾಗಿದೆ ಎಂದು ಪ್ರಕಟಿಸಿದರು. ಬಹುಶಃ ನಮ್ಮ ಭಟ್ಟ ನಡೆಯುವ "ಮೃದುತ್ವ"ಕ್ಕೆ ಇರಬೇಕೆಂದು ನನ್ನ ನಂಬಿಗೆ. ಏನಾದರೂ ಸಮಗಾರ ನಂಜಯ್ಯನಿಗೆ ಲಾಭ ಎನ್ನಿ. ಎಷ್ಟು ಗಟ್ಟಿಯ, ಯಾವ ಮೇಕಿನ ಶೂ ತೆಗೆದುಕೊಂಡರೂ ಅದು ಹದಿನೈದು ದಿನಗಳಲ್ಲಿ ಹುಡಿ. ಕೆಲವು ಸಮಯದ ಹಿಂದೆ ಅಮರ ಕಂಪೆನಿಯವರ ಚಿತ್ರಸಹಿತ ಹಾಕಿದ "ಇದು ಹೀಗೆ ನಡೆದರೂ ಸವೆಯುವುದಿಲ್ಲ" ಎಂಬ "ಶೂ"ವಿನ "ಎಡ್ವಟೈಸ್‌ಮೆಂಟ್" ನೋಡಿದೆ. ಚಿತ್ರ ಯಾರದೆಂದು ಮಾಡಿದ್ದೀರಿ? ನಮ್ಮ ಭಟ್ಟನದು!

ನಮ್ಮ ಗೆಳೆಯನು ಎಂದೆಂದಿಗೂ ಕೊಳೆ ಬಟ್ಟೆ ಅಪ್ಪಿತಪ್ಪಿಯಾದರೂ ಧರಿಸಿದವನಲ್ಲ. ಆದರೆ ಈ ಕುಂಭಕರ್ಣನಿಗೆ ಬಟ್ಟೆಯನ್ನು ಮಡಿಗೆ ಕೊಡಲು ಬಿಡುವೆಲ್ಲಿ ಸಿಗಬೇಕು? ಅಗಸನು ಬಂದರೂ "ಏನಿಲ್ಲಯ್ಯ" ಎಂದು ಅರೆ ನಿದ್ದೆಯಲ್ಲಿ ಕಳುಹಿಸಿಬಿಡುತ್ತಾನೆ. ಬಟ್ಟೆ ಎಲ್ಲ ಮುಗಿದು ಹೋಯಿತು, ಎಂದು ನೆನಪಾಗುವುದು ಬಟ್ಟೆಯೆಲ್ಲ ಮಾಸಿ ಹೋದ ಮೇಲೆ. ಬಳಿಕ ದಡಬಡಿಸಿ ಮೊದಲು ಒಂದಾಣೆಯಲ್ಲಿ ಮುಗಿಯುತ್ತಿದ್ದ ಬಟ್ಟೆಯನ್ನು ಎಂಟಾಣೆ ಕೊಟ್ಟು "ಅರ್ಜೆಂಟ್" ವಾಶ್ ಮಾಡಿಸುತ್ತಾನೆ! ಇದು ಅವನ ಮರುಳುತನ-ಮರುಳುತನವಲ್ಲ, ಮರುಳುತನ ಕೆಲವು ಕಾಲ ಮಾಡಿದರೆ ಅದು ಕಳೆಯನ್ನು ಕಳೆದುಕೊಂಡು ಅಭ್ಯಾಸವೆನಿಸುವುದಿಲ್ಲವೆ? ಹಾಗೆಯೇ ಅಭ್ಯಾಸ.

ಆದರೆ ಆಸಾಮಿ ಚೆನ್ನಾಗಿ ಓದಿದ್ದಾನೆ. ಅವನ ನಿದ್ದೆಯ

ಮಧ್ಯೆ ಇಷ್ಟೆಲ್ಲ ಹೇಗೆ ಓದಿದ ಎಂದು ನನಗೆ ಆಶ್ಚರ್ಯ. ಕನ್ನಡದ ಹಳೆಯ ಕವಿಗಳಾದ ರನ್ನ, ಪಂಪ, ಪೊನ್ನ, ಜನ್ನ ಯಾರು ಯಾರೋ ಇದ್ದಾರಲ್ಲ ಅವರು ಬರೆದ ಗ್ರಂಥಗಳೆಲ್ಲ ಅವನಿಗೆ ಕೈಯಲ್ಲಿದ್ದ ನೆಲ್ಲಿಕಾಯಿ ಮಾತ್ರವಲ್ಲ, ಬಾಯಿಗೆ ಹಾಕಿ ಜಗಿದು ಜಗಿದು ತಿಂದು ಸಿಹಿ ನೀರು ಕುಡಿವ ನೆಲ್ಲಿಕಾಯಿ. ಕುವೆಂಪು ನವಿಲಾಗಿ ಕುಣಿಕುಣಿದು, ಭೀತನಾಗಿ, ನಡುಗಿ ಮಣಿದ ಕೇಶಿರಾಜನ ಶಬ್ದಮಣಿದರ್ಪಣವನ್ನು ಅವನು ಕಡುಗಿ, ಕದಡಿ ಮುಷ್ಟಿಯೊಳಗೆ ಕೈ ಬೆರಳು ಕುಣಿಸಿ, ಬಾಯಿ ಜಿಬ್ಬಾಗ ಬರುವಂತೆ ಮಾಡಿಕೊಂಡ ಮಹಾ ಮೇಧಾವಿ. ಬೇಂದ್ರೆ ಮೊದಲಾದ ಹೊಸ ಲೇಖಕರ ಗ್ರಂಥರಾಶಿಯನ್ನು ಓದಿ ತಲೆ ತೂಗಿದ್ದಾನೆ [ಭಾರ ಎಷ್ಟೆಂದು!]. ಒಮ್ಮೊಮ್ಮೆ ಆವೇಶ ಬಂದರೆ, ಯಾರಾದರೂ ಅತಿ ಉಪದ್ರವ ಕೊಟ್ಟು ಬರೆ ಯಲೇ ಬೇಕೆಂದು ಹಠ ತೊಟ್ಟರೆ ವಿಚಾರಪರಿಪೂರ್ಣವಾದ ಗಂಭೀರ ಲೇಖನ ಬರೆಯುತ್ತಾನೆ. ಆದರೆ ದಸರಾ ಸಂಚಿಕೆ ಮುಂತಾದವುಗಳಿಗೆ ಅವನಿಂದ ಲೇಖನ ಬರೆಯಿಸುವಾಗ ಸಂಪಾ ದಕರು ಹಿಂದು ಮುಂದೆ ನೋಡಿಕೊಂಡು ಅವನ ಬಳಿಗೆ ಹೋ ಗಲಿ. ಅವನಿಗೆ ಚಿಕ್ಕ ಲೇಖನ ಬರೆದು ಗೊತ್ತೇ ಇಲ್ಲ. ಇಪ್ಪತ್ತು ಪುಟಗಳಿಂದ ಕಮ್ಮಿಯ ಲೇಖನವು ಅದೊಂದು ಲೇಖ ನವೇ? ಎಂದು ಅವನ ಪ್ರಶ್ನೆ! ಪತ್ರಿಕೆಯವರಿಗೆ ಜಾಹೀರಾತು ಹಾಕಲು, ಸಿನೆಮಾ ತಾರೆಗಳ ಚಿತ್ರಗಳನ್ನು ಮುದ್ರಿಸಲು, ಗಾಂಧಿ–ನೆಹರು ಫೊಟೋಗಳಿಂದ ಪತ್ರಿಕೆಯನ್ನು ಅಲಂಕರಿಸಲು ಸ್ಥಳವೇ ಸಾಕಾಗದೆ ಹೋದೀತು! ಅವನ ಲೇಖನಕ್ಕೆ ಕತ್ತ ರಿಯ ಪ್ರಯೋಗ ಮಾಡಿದರಂತೂ ಮುಗಿಯಿತು; ಅವನ ತೀಕ್ಷ್ಣ

ನಾಲಗೆಯಿಂದ ಹತ್ತು ಮಂದಿ ಚಂದಾದಾರರನ್ನು ಪತ್ರಿಕೆಯು ವರು ಕಳಕೊಂಡಂತೆಯೆ.

ಅವನ ಗುಣವಿಶೇಷಗಳು ತಿಳಿಯದಿದ್ದಲ್ಲಿ ಅವನ ಕೆಲವು ಮಾತಿನಿಂದ ನೊಂದು ಬಳಿಕ ಅವನ ಮನೆಯ ಮೆಟ್ಟುಕಲ್ಲನ್ನು ಹಲವು ಮಂದಿ ಗೆಳೆಯರು ಪುನಃ ಹತ್ತರು. ಅವನು ನಿದ್ದೆಯ ಗುಂಗಿನಲ್ಲಿರುವಾಗ ಮಿತ್ರರು ಬಂದರೆ "ನಿನ್ನನ್ನು ಯಾರು ಬರ ಹೇಳಿದರು? ನಡಿ, ಗೆಟ್ ಔಟ್" ಎಂದು ಅವನು ಎನಿತೊ ಬಾರಿ ಹೇಳಿದವನು. ತಿಂಡಿ ಕೊಟ್ಟನೆಂದು ಬೇಗ ಬೇಗ ತಿಂದರೆ "ತಟ್ಟೆ ನೆಕ್ಕಲಿಕ್ಕೂ ಹೇಸಲಿಕ್ಕಿಲ್ಲ" ಎಂದು ತಲೆಗೆ ಹೊಡೆದಂತೆ ಹೇಳಿದುದೂ ಇದೆ. ಯಾರಾದರೂ ತಮ್ಮ ಪ್ರಣಯದಲ್ಲಿ ಭಗ್ನರಾದವರಿದ್ದರೆ "ನಿನಗೆ ಬಹಳ ಸೊಕ್ಕು – ಹಾಗೆಯೇ ಆಗ ಬೇಕು" ಎಂದು ಒರಟು ಬುದ್ಧಿ ತೋರಿದ ಉದಾಹರಣೆಗಳು ಇಲ್ಲದಿಲ್ಲ. ಆದರೆ ಅವನ ಆತ್ಮದಲ್ಲಿ ಹಾಗೇನೂ ಇಲ್ಲ. ಗೆಳೆಯನು ಕಷ್ಟದಲ್ಲಿದ್ದರೆ ಪರಿತಾಪ ಪಡುವ ವ್ಯಕ್ತಿಯೆಂದು ಎಲ್ಲರಿಗೂ ತಿಳಿದ ಸಂಗತಿ. ಆದುದರಿಂದ ಅವನು ಏನೆಂದರೂ ಸುಮ್ಮನೆ ಒಮ್ಮೆ ನೋವಾದರೂ ಅವನ ಗೆಳೆತನವನ್ನು ಯಾರೂ ಬಿಡಲಾರರು!

ಅವನ ಹಸಿವೆ ಹೆಸರುವಾಸಿಯಾದುದು. ಹಗಲಿರುಳು ಎಡೆಬಿಡದೆ ಒಂದು ನಿಮಿಷವೂ ವ್ಯರ್ಥವಾಗಿ ಹೋಗದಂತೆ ಗೊರಕೆ ಹೊಡೆಯುವ ಈ ಹೆಬ್ಬಾವಿಗೆ ಏನು ಹಸಿವೆಯೋ! ಒಂದು ಬಾರಿ ಅವನ ಹೆಂಡತಿ ತವರೂರಿಗೆ ಹೋಗಿದ್ದಳು. ಒಂದೆರಡು ದಿನ ಭಟ್ಟ ಹೊಟೇಲಿನಲ್ಲಿ ನಾಲ್ಕು ಔನ್ಸ್ ಎಂದು ಕೊಡುವ ಎರಡು ಔನ್ಸು ಅನ್ನ ಉಂಡು ಕಂಗಾಲಾದ. ಅದಕ್ಕೆ

ಸರಿಯಾಗಿ ಕೆಲಸದ ಮೇಲೆ ಅವನ ಗೆಳೆಯ— ಅವನ ಹೆಸರು ನನಗೆ ತಿಳಿಯದು, ಅವನನ್ನು ಎಲ್ಲರೂ ಕರೆಯುವುದು ಜಾರ್ಜಟೌನ್ ಎಂದು—ಬಂದ. ಇಬ್ಬರೂ ಒಂದೇ ತೆರನಾದವರು. ಒಂದೂವರೆ ಸೇರಕ್ಕಿ ಬೇಯಿಸಿದರೆ ಎಲೆ ಬಿಟ್ಟು ಏಳಲು ಮನಸ್ಸು ಮಾಡುವ ಮನಸ್ಸುಳ್ಳ ಜನರು. ಹಾಗೆ ಉಂಡ ಮೇಲೂ ಎಂಟು ಡಜನ್ ಬಾಳೆಯ ಹಣ್ಣಿಗೂ ಹತ್ತು ಕಪ್ಪು ಕಾಫಿಗೂ ಅವರಲ್ಲಿ ಸುಲಭದಲ್ಲಿ ಎಡೆ ಇದೆ ನನಗೆ ಕಾಣುತ್ತಿದೆ, ಅವರನ್ನು "ಎಕ್ಸರೇ" ತೆಗೆಯಿಸಿದ್ದರೆ ಅವರ ಎದೆಯಲ್ಲೊ, ತೊಡೆಯಲ್ಲೊ, ಭುಜದಲ್ಲೊ— ಇನ್ನೆರಡು ಹೊಟ್ಟೆಗಳಾದರೂ ಕಾಣಸಿಗಬಹುದೆಂದು! ಹೊಟ್ಟೆ "ಬೆಲೂನಿ"ನಂತೆ ಉಬ್ಬಿಕೊಂಡಿರದಿದ್ದರೂ, ಇವರು ಹೀಗೆ ತಿಂದರೆ ಅದೆಲ್ಲಿ ತಂಗಬೇಕು! ಜಾರ್ಜಟೌನ್ ಬಂದನೆಂದೆನಲ್ಲ. ಬರುವಾಗ ಅವನು ಒಂದು ಡಬ್ಬಿ ತುಂಬ ಉಂಡೆ ತಂದಿದ್ದ—ಐವತ್ತುನೂರು ರವೆ ಉಂಡೆ. ಅವನಿಗೆ "ಹಸಿವೆ"ಯ ತಿಳಿವಳಿಕೆ ಇಲ್ಲದಿಲ್ಲ. ಆದುದರಿಂದ ಅದನ್ನು ಭಟ್ಟನಿಗೆ ತೋರಿಸಲೇ ಇಲ್ಲ. ಆಫೀಸಿಗೆ ಭಟ್ಟ ಹೋದ ಬಳಿಕ ಅದನ್ನು ಬರಿದು ಮಾಡಬೇಕೆಂದು ಯೋಚಿಸಿದ್ದ. ಆದರೆ ಭಟ್ಟನಿಗೆ, ಜಾರ್ಜಟೌನ್ ಸೆಂಟ್ರಲ್ ಸ್ಟೇಶನಿನಲ್ಲಿ ಇಳಿದಾಗಲೆ ಅದರ ಪರಿಮಳ ಬಂದಿರಬೇಕು. ಜಾರ್ಜಟೌನ್ ನಾಲಿಗೆ ಬಿಗಿ ಹಿಡಿದುಕೊಂಡು ನಿದ್ದೆ ಹೋದ ಬಳಿಕ ಭಟ್ಟ ಐವತ್ತೆರಡೂವರೆ ರವೆ ಉಂಡೆ ತಿಂದು ಉಳಿದ ಅರ್ಧವನ್ನು ಡಬ್ಬಿಯಲ್ಲಿಟ್ಟು, ಅರಿಯದವನಂತೆ ಸರಿಯಾಗಿ ನಿದ್ದೆ ಹೋದ. ಈ ಹೋಟೆಲು ಊಟ ಪೂರೈಸದೆಂದು ಇಬ್ಬರೂ ಬೆಳಿಗ್ಗೆ ಎದ್ದೊಡನೆ ಒಂದೂವರೆ ಸೇರಕ್ಕಿಯ ನಳ ಪಾಕ ಮಾಡಿ

ತಿಂದು ಮುಗಿಸಿದರು. ಭಟ್ಟ ಆಫೀಸಿಗೆ ಹೊರಟು ಐದು ಘಂಟೆಗೆ ಬರುತ್ತೇನೆಂದು ಮೆಟ್ಟಲಿಳಿದು ಹೋದ. ಸಮಯ ಕಾಯುತ್ತಿದ್ದ ಜಾರ್ಜಟೌನ್ ಮೆಲ್ಲಗೆ ಡಬ್ಬಿ ತೆಗೆದು ನೋಡುತ್ತಾನೆ— ಅವನ ಮುಖ ಪೆಚ್ಚಾಯಿತು! ಹಿಂದಿನಿಂದ "ಹೆಗ್ಗಣ ತಿಂದಿರಬೇಕು" ಎಂದು ದೊಡ್ಡ ನಗೆ ಕೇಳಿ ಬಂತು. ಭಟ್ಟ ಹೋಗಿಯೇ ಇರಲಿಲ್ಲ. ಈ ಕಳ್ಳ ಹೇಗೆ ಮಾಡುತ್ತಾನೆಂದು ಯೋಚಿಸಿದ್ದ ಅವನು ಹಿಂತಿರುಗಿ ಬಂದಿದ್ದ. ಜಾರ್ಜಟೌನ್ ಹೊಟ್ಟೆ ತುಂಬದಿದ್ದರೂ "ಅರೆ ಹೆಗ್ಗಣ! ಅರ್ಧ ಆದರೂ ಇಡುತ್ತಿದ್ದಿಯಲ್ಲ" ಎಂದು ಹೊಟ್ಟೆ ತುಂಬ ನಕ್ಕ!



# ೧. ದೊಡ್ಡಮನೆ ವೆಂಕಪ್ಪ

ದೊಡ್ಡಮನೆ ವೆಂಕಪ್ಪ ದೊಡ್ಡ ಮನೆತನದವನು. ಶ್ರೀಮಂತ ರಾದ ತಂದೆತಾಯ್ಗಳ ಒಬ್ಬನೇ ಮಗ. ಈಗ ನಾಲ್ಕು ವರ್ಷಗಳ ಹಿಂದೆ ಅವರು ಒಬ್ಬರ ಹಿಂದೆ ಒಬ್ಬರು ತೀರಿಕೊಂಡರು. ಹದಿನೆಂಟು ವರ್ಷದ ತರುಣ ಕುಡಿಮೀಸೆ ಚಿಗುರುತ್ತಿರುವ ವೆಂಕಪ್ಪ ಪಟ್ಟಕ್ಕೆ ಬಂದ.

ವೆಂಕಪ್ಪ ಪಟ್ಟಕ್ಕೆ ಬಂದದ್ದೆ ಬಂದದ್ದು, ಅವನ ಮನೆಯ ಬಣ್ಣವೇ ಬದಲಾಯಿತು. ಹಳದಿ ಬಡಿದ ಗೋಡೆ ಸುಣ್ಣ ಬಳಿದು ಸುಂದರವಾಯಿತು. ಆ ಬದಿಗೆ–ಈ ಬದಿಗೆ ಕೋಣೆಗಳು ಸೇರಿಕೊಂಡವು. ಕಿಟಕಿ ಇತ್ಯಾದಿಗಳಿಗೆ 'ಸಿಲ್ವರ್ ಪೈಂಟ್' ಆಯಿತು. ಅಪ್ಪ ಸತ್ತು ನಾಲ್ಕು ತಿಂಗಳಾಗಬೇಕಾದರೆ ಸುಮಾರು ಐದು ಮೈಲು ದೂರದ ಬಸ್ಸು ರಸ್ತೆಯಿಂದ ಮನೆಯ ತನಕ ಕಾರು ಬರುವ ಖಾಸಗೀ ರಸ್ತೆ ಆಯಿತು. ಅಪ್ಪ ವಕೀಲರ ಆಫೀಸುಗಳಿಗೆ 'ರಿಕಾರ್ಡು' ಕಟ್ಟು ಹೊತ್ತು ಕುಣಿದು, ವ್ಯಾಜ್ಯದ ಮೇಲೆ ವ್ಯಾಜ್ಯ ಹೂಡಿ, ಭೂಮಿಯ ಕ್ರಯಕ್ಕಿಂತ ಹೆಚ್ಚು 'ಫೀಸು' ತೆತ್ತು ಗೆದ್ದ ಕೊಳಕೆ ಗದ್ದೆಗಳ ಮಧ್ಯೆ ಸುಂದರವಾದ ರಸ್ತೆ ಚಾಚಿಕೊಂಡಿತು. 'ಎಂಥ ಗದ್ದೆಗಳನ್ನು ಲಗಾಡಿ ತೆಗದಿ ಮಹಾರಾಯಾ...ಬದಿಗೆ ತೆಂಗಿನ ಗಿಡಗಳನ್ನಾದರೂ ಹಾಕು' ಎಂದರು ಅವನ ಮಾವ, ತಾಯಿಯ ತಮ್ಮ. 'ಅದೆಂಥ ಕರ್ಮಕ್ಕೆ? ಚಂದವೂ ಇಲ್ಲ; ನೆರಳೂ ಇಲ್ಲ. ಒಳ್ಳೆ ದೇವದಾರ ಗಿಡ ನೆಡುವೆ' ಎಂದು ನೆಟ್ಟೇ ಬಿಟ್ಟ ಬದಿಗಳಿಗೆ ನೂರ ಎಂಟು

ದೇವದಾರು ಗಿಡಗಳನ್ನು. 'ಬಹಳ ಚೆನ್ನಾಗಿದೆ, ಜನರಿಗೆ ಎಷ್ಟು ಅನುಕೂಲ' ಎಂದು ಅವನನ್ನು ಬಾಯಿ ತುಂಬ ಹೊಗಳಿದವರೂ ಇದ್ದಾರೆ. ಆದರೆ ಹೊಟ್ಟೆಬಾಯಿ ಕಟ್ಟಿ ಅವನಪ್ಪ ಕೂಡಿಟ್ಟ ೩೫,೦೦೦ದಲ್ಲಿ ೧೦,೦೦೦ ಕೊಳಕೆ ಗದ್ದೆಗಳನ್ನು ಹಾಳು ಮಾಡಿದ ರಸ್ತೆಗೆ, ಗುಡ್ಡ ಕಾಡಿನಲ್ಲಿ ಹತ್ತಿ ಇಳಿಯುವ ರಸ್ತೆಗೆ ಕರಗಿ ಹೋಯಿತೆಂದು ಅವರಿಗೇನು ಗೊತ್ತು? 'ಕರಗಿಹೋದರೆ ಏನಾಯ್ತು? ಜನರಿಗೊಂದು ಶಾಶ್ವತ ಸೌಕರ್ಯವಾಗಲಿಲ್ಲವೆ? ದೊಡ್ಡ ಮನೆಯೆಂಬ ಹೆಸರಿಗೆ ಇದೊಂದು ಶಾಶ್ವತದ ಕೀರ್ತಿಯಾಗಲಿಲ್ಲವೆ?'

ದೊಡ್ಡ ಮನೆ ವೆಂಕಪ್ಪನ ದೊಡ್ಡ ಮನಸ್ಸು, ಧಾರಾಳ ಮನಸ್ಸು ದಿನದಿನಕ್ಕೆ ಬೆಳಕಿಗೆ ಬರತೊಡಗಿತು. ಅವನ ತಂದೆ ತಾಯ್ಗಳ ವರ್ಷಾಂತಿಕಗಳೂ ಬಹಳ ವಿಜೃಂಭಣೆಯಿಂದ ಜರಗಿದುವು. ಎಂಟಾಣೆ ದಕ್ಷಿಣೆಯನ್ನು ಬ್ರಾಹ್ಮಣರು ಸೊಂಟಕ್ಕೆ ಸಿಕ್ಕಿಸಿಕೊಂಡು 'ನಿಜವಾಗಿಯೂ ದೊಡ್ಡ ಮನೆಯವನಪ್ಪ' ಎಂದು ಬಾಯಿತುಂಬ ಆಶೀರ್ವಾದಮಾಡಿದರು. ಬಹುಶಃ ತಂದೆ ತಾಯ್ಗಳಿಬ್ಬರೂ ಸ್ವರ್ಗಕ್ಕೇ ಹೋಗಿರಬೇಕು.

ವರ್ಷಾಂತಿಕ ಕಳೆಯುವಾಗ ದೊಡ್ಡ ಮನೆ ವೆಂಕಪ್ಪನಿಗೆ ೫೦೦೦ ರೂ. ಸಾಲವಾಯಿತು. 'ಇಷ್ಟು ಹಣ ಏನುಮಾಡಿದ?' ಎಂದು ಯಾರಾದರೂ ಕೇಳಬಹುದು. ವೆಂಕಪ್ಪನಿಗೆ ಅದು ತಿಳಿಯದು; ಬಳಿಕ ನನಗಾಗಲಿ, ನಿಮಗಾಗಲಿ ಹೇಗೆ ತಿಳಿಯಬೇಕು? ಆದರೆ ಅವನಿಗೆ ಇದೆಲ್ಲ ಯಾವ ಲೆಕ್ಕ? ಹೇಗೆಂದರೂ ವರ್ಷಕ್ಕೆ ಯಾವ ಕಾಲದಲ್ಲೂ ೧೫,೦೦೦ದಿಂದ ಮೇಲ್ಪಟ್ಟು ಉತ್ಪತ್ತಿಯಿದೆ. ಬಳಿಕ ದೊಡ್ಡಮನೆಯವನಲ್ಲವೆ? ಆ ಅಂತಸ್ತಿಗೆ ಸರಿಯಾಗಿ ಇರಬೇಡವೆ?

ಮರು ವರ್ಷ ವೆಂಕಪ್ಪನ ರಸ್ತೆಯಲ್ಲಿ ೧೯೩೭ನೇ ಮಾಡೆಲ್‌ನ ಸ್ವಂತ 'ಫೋರ್ಡ್' ಕಾರು ಓಡಾಡತೊಡಗಿತು. ಅದು ಹೋಗುವಾಗ ಕಡಿಮೆಯೆಂದರೆ ಮೂರು ಮೈಲು ದೂರಕ್ಕೆ ಅದರ ಶಬ್ದ ಕೇಳುತ್ತಿತ್ತು. ಅದರ ಶಬ್ದ ಕೇಳಿ ಹಳ್ಳಿಗರು 'ನಿಜವಾಗಿಯೂ ದೊಡ್ಡಮನೆಯವರ ಕಾರು, ಬಹಳ ಗಟ್ಟಿಯಾದ ಕಾರು, ಬಹಳ ಬಲವಾದ ಕಾರು, ಬಹಳ ಉತ್ತಮ ಕಾರು' ಎಂದೇ ಗ್ರಹಿಸಿದರು. ಶಕ್ತಿಯುತವಾದ ಶಿಶುವಲ್ಲವೆ ಗಟ್ಟಿಯಾಗಿ ಕಿರಚುವುದು! ಅದಕ್ಕೆ ಮೂರು ಸಾವಿರ ರೂಪಾಯಿ ಕೊಟ್ಟಿದ್ದನೆಂದು ಅದರ 'ಡ್ರೈವರು' ಹೇಳುತ್ತಿದ್ದ. ವೆಂಕಪ್ಪನಿಗೆ ಮೂರು ತಿಂಗಳಲ್ಲೇ ಅದರಲ್ಲಿ ಬೇಸರ ಬಂತು. ಹೊಸ 'ಮೋರಿಸ್' ಕಾರೊಂದನ್ನು ತೆಗೆದ. ಅದು ಅವನ ಭಯಂಕರ ರಸ್ತೆಯನ್ನು ಹತ್ತಿ ಇಳಿಯತೊಡಗಿತು. ಭಯಂಕರ ರಸ್ತೆಯೆಂದರೆ ಅಲ್ಲಿ ಕಳ್ಳಕಾಕರ ಭಯವಿದೆಯೆಂದಲ್ಲ. ೩೦-೪೦ ಡಿಗ್ರಿಗಳಲ್ಲಿ ರಸ್ತೆ ಎರಡು ಗುಡ್ಡಗಳ ಮೇಲೆ ಏರಿ ಹೋಗಬೇಕು. ಆ ರಸ್ತೆಯ ಒಂದು ಬದಿಗೆ ದೊಡ್ಡ ಕಣಿವೆ. ಆ ಕಣಿವೆಗೆ ಕಾರು ಮೊಗಚಿಕೊಂಡರೆ ಕಾರನ್ನು ಎಳೆದು ತೆಗೆಯುವುದಿರಲಿ, ಅದರಲ್ಲಿ ಹೋದ ಜೀವಗಳನ್ನು ನಾಯಿ-ತೋಳಗಳಿಗೂ ಪತ್ತೆ ಮಾಡುವುದು ಅಸಾಧ್ಯ. ಹಾಗಾಗಿಯೇ ಹೇಳಿದೆ, ಭಯಂಕರ ರಸ್ತೆ...ಇನ್ಶ್ಯೂರು ಮಾಡಿಯೇ ಕುಳಿತುಕೊಳ್ಳಬೇಕೆಂದು. ಸಣ್ಣ ಕಾರಲ್ಲವೆ, ನಾಲ್ಕು ತಿಂಗಳಲ್ಲೆ ಅದಕ್ಕೆ ಬಚ್ಚಿ ಹೋಗಿರಬೇಕು. ಒಂದು ದಿನ 'ನಾನು ಮೇಲೆ ಬರುವುದಿಲ್ಲ'ವೆಂದು ಸತ್ಯಾಗ್ರಹ ಹೂಡಿತು. ವೆಂಕಪ್ಪ, ಅವನ ಕೆಲಸದವರು, ಡ್ರೈವರು ಮುಂತಾದವರು ಅದನ್ನು ಹೇಗಾದರೂ

ಮಾಡಿ ಮೇಲೆ ಕೊಂಡುಹೋಗಬೇಕೆಂದು ಒತ್ತಾಯಿಸುತ್ತಿದ್ದಾಗ ಮುರಾರಿ ರಾಮು ಆ ದಾರಿಯಾಗಿ ಬಂದ. ಅವನಿಗೆ ದೊಡ್ಡಮನೆಯವರು, ಸಣ್ಣ ಮನೆಯವರು ಎಂಬ ಯಾವ ಭೇದ ಭಾವವೂ ಇಲ್ಲ; ಹೆದರಿಕೆಯೂ ಇಲ್ಲ. ನೆಗಾಡಿಕೊಂಡೇ ಕಟು ವಿಮರ್ಶೆ ಬಿಗಿಯುವ ಆಸಾಮಿ ಅವನು. 'ಒಳ್ಳೆ ಕಾರು ಧನಿಗಳದು. ದೊಡ್ಡಮನೆಯವರಿಗೆ ಇಂಥ ಕಾರೆ?' ಎಂದು ನಾಲಿಗೆ ಚಚ್ಚು ಕಣ್ಣು ಚಲಾಯಿಸಿಯೇ ಬಿಟ್ಟ. ವೆಂಕಪ್ಪನಿಗೆ ಆ ಮಾತು ಕೇಳಿ ಮುಖ ಸಪ್ಪಗಾಯಿತು. 'ದೊಡ್ಡಮನೆ'ಗೆ ಇದೊಂದು ಕಲಂಕ ಎಂದುಕೊಂಡ. ಎರಡು ದಿನಗಳಲ್ಲಿ ಅವನ ಸ್ವಂತ 'ಸ್ಟುಡ್ ಬೇಕರ್', ದೊಡ್ಡ ಕಾರು, ದೊಡ್ಡ ಮನೆಗೆ ಒಪ್ಪುವಂಥ ವಾಹನ, ಆ ರಸ್ತೆಯಲ್ಲಿ ಓಡಾಡತೊಡಗಿತು.

ಸ್ಟುಡ್‌ಬೇಕರ್ ಬರುವಾಗ ದೊಡ್ಡಮನೆ ಆಸ್ತಿಯ ಮೇಲೆ ೩೫,೦೦೦–೪೦,೦೦೦ ಸಾಲ ನಿಂತಿತು. ಆದರೆ ವೆಂಕಪ್ಪ ದೊಡ್ಡ ಮನೆಯವ ಇದಕ್ಕೆಲ್ಲ ಹೆದರುವನೇ!

ವರ್ಷಗಳು ಎರಡು ದಾಟಿದುವು. ಅವನಿಗೆ ಅಬಲೆಯರಲ್ಲಿ ಇರುವ ಮಮತೆ, ಕುಡಿಯುವುದು, ಜೂಜಿಗೆ ಕಟ್ಟುವುದು, ಊರಿನವರಲ್ಲೆಲ್ಲ ಪರಮ ಮಿತ್ರತ್ವದಿಂದ ನಡೆಕೊಳ್ಳುವುದು ಈ ನಾಲ್ಕು ದುರ್ಗುಣಗಳನ್ನು ಬಿಟ್ಟರೆ ಬೇರಾವ ದುರ್ಗುಣಗಳೂ ಇರಲಿಲ್ಲ. ಹುಟ್ಟಿದಂದಿನಿಂದ ಇದುತನಕ ಒಂದು ಬೀಡಿ, ಸಿಗರೇಟು ಸೇದಿದವನಲ್ಲ. ಪಾಪ! ಈ ನಾಲ್ಕೇ ನಾಲ್ಕು ದುರ್ಗುಣ ಗಳಿಂದಾಗಿ ಅವನ ಸಂಪೂರ್ಣ ಆಸ್ತಿ, ಸ್ಟುಡ್‌ಬೇಕರ್ ಕಾರು ಸಹಿತ, ಸಾಲ ಕೊಟ್ಟವರು ಅವರ ಹಣಕ್ಕೆ ಹರಾಜು ಮಾಡಿಸಿ ದೊಡ್ಡಮನೆ ವೆಂಕಪ್ಪನನ್ನು ಊರಿನಿಂದಲೇ ಓಡಿಸಿಬಿಟ್ಟರು.

ಮಂಗಳೂರಿನಲ್ಲಿರುವ, 'ರಸ್ತೆಯ ಬದಿಗೆ ತೆಂಗಿನ ಗಿಡ ನಡು' ಎಂದು ಹೇಳಿದ ಮಾವನ ಮನೆಯಲ್ಲಿ ನಾಚಿಗೆಯಿಲ್ಲದೆ ಇರುವಂತೆ ಮಾಡಿದರು.

ಆದರೂ ವೆಂಕಪ್ಪ ಸೋಮಾರಿಯಲ್ಲ. ಯಾವಾಗಲೂ ಅವನಿಗೆ ಕೆಲಸವೇ ಕೆಲಸ. ಯಾವಾಗಲೂ ಹಂಪನಕಟ್ಟೆಯಿಂದ ಬಂದರಕ್ಕೆ, ಬಂದರದಿಂದ ಉರ್ವ, ಉರ್ವದಿಂದ ರೈಲ್ವೇ ನಿಲ್ದಾಣಕ್ಕೆ ರಭಸದಿಂದ ಹೋಗುತ್ತಿರುತ್ತಾನೆ. ದೊಡ್ಡ ಹತ್ತಿ ವ್ಯಾಪಾರಿಯಾಗಿದ್ದಾನೆ. ನ್ಯೂಯಾರ್ಕದಲ್ಲಿ ಹೇಗೆ, ಯಾವಾಗ, ಎಂತು ಹತ್ತಿ ವ್ಯಾಪಾರ ಮೊದಲಾಯಿತು, ಕೊನೆಯುದಾಯಿತು ಎಂಬುದು ಅವನಿಗೆ ಬಾಯಿಪಾಠ. 'ಹತ್ತಿ ವ್ಯಾಪಾರವಂತೆ. ಹತ್ತಿ ವ್ಯಾಪಾರ. ಒಂದುಸಿರು ಬಡ್ಡಿಗೆ ಹಣ ಕಟ್ಟುವುದೇ ಅವನ ಕೆಲಸ' ಎಂದು ಅನೇಕ ಜನರು ಹೇಳುತ್ತಿದ್ದರು. ಅದು ಹೇಗೂ ಇರಲಿ, ವೆಂಕಪ್ಪ ದೊಡ್ಡ ಮನೆ ಒಂದೇ ದಿನದಲ್ಲಿ ರೂ. ೫೦,೦೦೦ದ ಧನಿಕನಾದ. ಎಲ್ಲೆಲ್ಲಿಯೂ ವೆಂಕಪ್ಪನಿಗೆ ಬಿಡ್ಡಿನಲ್ಲಿ ಭಾರಿ ಹಣ ದೊರೆಯಿತೆಂದು ಸುದ್ದಿ.

ಮರುದಿನ ವೆಂಕಪ್ಪ ಮದ್ರಾಸಿಗೆ 'ಫಸ್ಟ್‌ಕ್ಲಾಸಿ'ನಲ್ಲಿ ಪ್ರಯಾಣ ಬೆಳೆಸಿದ. ಅವನು ಅದು ತನಕ ಮದ್ರಾಸಿಗೆ ಬಂದವನಲ್ಲ. ನಾನು ಆಗ ಮದ್ರಾಸಿನಲ್ಲಿ ಓದುತ್ತಿದ್ದೆ. ನನಗೆ ಅವನು ಬಹು ದೂರದ ಸಂಬಂಧಿಕ. ತಂತಿ ಬಂದ ಪ್ರಕಾರ ವೆಂಕಪ್ಪನನ್ನು ರೈಲ್ವೆ ನಿಲ್ದಾಣದಲ್ಲಿ ಕಾಣಲು ಹೋದೆ. ಫಸ್ಟ್ ಕ್ಲಾಸಿನಿಂದ ಇಳಿಯುವಾಗ ನಾನು 'ಅಬ್ಬಾ ಇವನ ಸೊಕ್ಕೆ... ಇವನ ಮನೆ ವಗೈರೆ ಹರಾಜಾಗಿದೆಯಂತೆ...ಇವನಲ್ಲಿ ಹೀಗೆ ದರ್ಬಾರು ಮಾಡಲು ಹಣ ಎಲ್ಲಿಂದ?' ಎಂದು ಯೋಚಿಸಿ

ಕೊಂಡೆ. ಇದರ ಗುಟ್ಟು ನನಗೆ ತಿಳಿದುದು ನಾಲ್ಕು ದಿನಗಳ ಬಳಿಕ–ಒಬ್ಬ ಮಿತ್ರನ ಪತ್ರದಿಂದ. 'ಎಲ್ಲಿಗೆ ಹೋಗುವುದು?' ಎಂದು ಕೇಳಿದೆ. 'ಹೋಟೇಲ್ ಕಿಸೆಬಾರಾ–ಬಹು ದೊಡ್ಡ ಹೋಟೆಲಂತೆ, ದೊಡ್ಡ ಮನುಷ್ಯರು ಮಾತ್ರ ಅಲ್ಲಿಗೆ ಹೋಗುವುದಂತೆ. ಬೇರೆಡೆಗೆ ಹೋದರೆ ಗತಿ ಇಲ್ಲದ ಪ್ರಾಣಿಗಳು ಬಂದು ಕೊಂಡು ಪಿರಿ, ಪಿರಿ...' ಎಂದ. ಕಾರಿಗೆ ಸಾಮಾನಿಡಲು ಕೂಲಿಗೆ ಹೇಳಿದೆ. ವೆಂಕಪ್ಪ ಕೂಲಿಗೆ ಎರಡು ರೂಪಾಯಿ ಎಸೆದ. ನನಗೆ ಹೊಟ್ಟೆ ಉರಿಯಿತು. 'ಎಂಟಾಣೆ ಸಾಕಿತ್ತು...ಎರಡು ರೂಪಾಯಿಯೇ?' ಎಂದು ಆಶ್ಚರ್ಯದಿಂದ ಕೇಳಿದೆ. ಕೂಲಿಗೆ ನನ್ನ ಮಾತು ಕೇಳಿ ರೇಗಿತು. 'ದೇವರು ಕೊಟ್ಟರೂ ಪೂಜಾರಿ ಬಿಡ. ಇವನ ಗಂಟು ಏನು ಹೋಗುವುದು...ರಾಯರು ದೊಡ್ಡ ಮನಸ್ಸಿನಿಂದ ಕೊಡುವಾಗ ತಡೆಯುತ್ತಾನೆ' ಎಂದು ಗದರಿಸಿದ. ಕಾರು ಹೊರಟಿತು. ಇಲ್ಲವಾದರೆ ಕೂಲಿ ನನಗೆರಡು ಬಿಸಿ ಮಾಡುತ್ತಿದ್ದನೋ–ಏನೊ? ದುಡ್ಡು ಸುಲಿಯಲು ಇದು ಒಳ್ಳೆಯ ಸಂದರ್ಭ ಎಂದು ಕಾರಿನವನಿಗೂ ಗೊತ್ತಾಗಿರಬೇಕು. ಅಲ್ಲಿಂದ ಎರಡೇ ಎರಡು ಮೈಲು ದೂರದ ಹೋಟೇಲಿಗೆ ಅವನ ಬಿಲ್ಲು ಬರೇ ಇಪ್ಪತ್ತು ರೂಪಾಯಿ! ವೆಂಕಪ್ಪ ತುಟಿಪಿಟಕ್ಕೆಂದನೇ? ದುಡ್ಡು ಎಣಿಸಿ ಎಸೆದೇಬಿಟ್ಟ. ರಾಜ ಮಹಾರಾಜರು ಕೂಡ ದುಡ್ಡು ಎಂದರೆ ಇಷ್ಟೊಂದು ನಿರಾಸಕ್ತಿ ವಹಿಸುತ್ತಿದ್ದರೊ ಇಲ್ಲವೊ! ವೆಂಕಪ್ಪನಿಗೆ 'ಫಸ್ಟ್ ಕ್ಲಾಸು' ಕೋಣೆಯೊಂದರ ಏರ್ಪಾಡಾಯಿತು. ಕಾಫಿ–ಇತ್ಯಾದಿಗಳನ್ನು ತರಲು ಹೇಳಿದ... ಅಲ್ಲಿಯೂ ಬಿಲ್ಲಿನಿಂದ ಹೆಚ್ಚು 'ಭಕ್ಷೀಸು'. ನನ್ನ ಕಣ್ಣನ್ನು ನಾನೇ ನಂಬಲಿಲ್ಲ. 'ನಾಳೆ ಬರುತ್ತೇನೆ' ಎಂದು ಹೊರಟೆ. 'ಐದು ಐದೂವರೆಗೆ ಬಾ; ಮದ್ರಾಸು ನೋಡುವ' ಎಂದ.

ಮರುದಿನ ಐದು ಘಂಟೆಗೆ ಆವನ ಕೋಣೆಗೆ ಹೋದೆ. ಬಾಗಿಲು ಹಾಕಿತ್ತು. ಕಾಲುಘಂಟೆಯಲ್ಲಿ ವೆಂಕಪ್ಪನ ಸವಾರಿ ಕಾರಿನಿಂದ ಇಳಿಯಿತು. ತೀರಾ ಹೊಸಬನಾಗಿದ್ದ. ಸರ್ಜ ಕೋಟ್, ಪೇಂಟ್, ಟೈ, ಫೆಲ್ಟ್‌ಹೇಟ್, ಕನ್ನಡಕ, ಮಿರುಗುವ ಶೂಸ್, ಕೈಯಲ್ಲೊಂದು ನಯವಾದ ಬೆತ್ತ...ಒಂದೇ ದಿನದಲ್ಲಿ. ಹೇಗೆ ಬದಲಾಗಿಬಿಟ್ಟ ಎಂಬುದೇ ಆಶ್ಚರ್ಯದವಾತು! ಕೋಣೆಯ ಬಾಗಿಲು ತೆಗೆದ. ೧೦–೨೫ ಚಿಕ್ಕ ಚಿಕ್ಕ ಪುಸ್ತಕಗಳು ಬಿದ್ದಿದ್ದುವು. ನೋಡಿದೆ...ಎಲ್ಲವೂ ಆ ದಿನದ ರೇಸ್ (ಕುದುರೆ ಜೂಜು) ಪುಸ್ತಕಗಳು. 'ಎಲ್ಲಿಗೆ ಹೋಗಿದ್ದಿರಿ?' ಎಂದು ವಿಚಾರಿಸಿದೆ. 'ಕುದುರೆ ರೇಸ್ ನೋಡಲು ಇಲ್ಲಿಯುವರೊಬ್ಬರ್ರು ಕರೆದುಕೊಂಡು ಹೋದರು' ಎಂದ. ಮದ್ರಾಸು ನೋಡಲು ಬಳಿಕ ಹೊರಟೆವು. ಕಾರಿನಲ್ಲಿ ಎಂಬುದನ್ನು ಬರೆಯಬೇಕಾಗಿಲ್ಲ. ದಾರಿಯಲ್ಲಿ ಐಯ್ಯರ್ ಹೋಟೇಲಿಗೆ ನುಗ್ಗಿದೆವು. ಬಾದಾಮ್ ಹಲ್ವ, 'ಸ್ಪೆಶಲ್' ಮಸಾಲೆಗಳಿಗೆ 'ಆರ್ಡರ್' ಆಯಿತು. ಐಯ್ಯರ್ ಹೋಟೇಲು ಈ ಎರಡು ತಿಂಡಿಗಳಿಗೆ ಮದ್ರಾಸಿನಲ್ಲೆ ಅತಿ ಪ್ರಖ್ಯಾತವಾದುದು. ಆ ಹೋಟೆಲಿನ ಹತ್ತಿರ ಬರುವಾಗಲೆ ಸ್ಪೆಶಲ್ ಮಸಾಲೆಯ ಪರಿಮಳದಿಂದ ಬಾಯಿ ನೀರೂರುತ್ತದೆ. ಬಾದಾಮ್ ಹಲ್ವ ಸ್ವಲ್ಪ ಬಾಯಿಗೆ ಹಾಕಿ ಅಲ್ಲಿ ಇಟ್ಟ ವೆಂಕಪ್ಪ. 'ಏನಾಗಿದೆ?' ಎಂದು ವಿಚಾರಿಸಿದೆ. 'ಸ್ವಲ್ಪ ಸ್ವಲ್ಪ ತಿನ್ನಬೇಕೋ...ಅದು ದೊಡ್ಡ ಕ್ರಮ...' ಎಂದ. 'ಇವನ ದೊಡ್ಡಸ್ತಿಕೆಗೆ ಬೆಂಕಿ ಹಾಕಿತು' ಎಂದು ಮನಸ್ಸಿನಲ್ಲೆ ನೆನೆದುಕೊಂಡು ನಾನು ಪೂರಾ ಹೊಡೆದೆ. ಘಮ ಘಮಿಸುವ ಕಾಫಿಯನ್ನಾದರೂ ಕುಡಿಯಬಾರದಿತ್ತೆ? ಅದನ್ನು ಸಹ ಬಿಡಲು

ಹೇಗೆ ಮನಸ್ಸು ಬಂತೊ? ಆಹಾ! ಏನು ನಾಲಗೆಯನ್ನು ಬಿಗಿ ಹಿಡಿಯುವ ಶಕ್ತಿ! ಸನ್ಯಾಸಿಯಾಗಲು ಯೋಗ್ಯನೆ ಸರಿ! ಒಂದು ರೂಪಾಯಿ ಹನ್ನೆರಡಾಣೆ ಬಿಲ್ಲಾಯಿತು. ಎರಡು ರೂಪಾಯಿ ಕೊಟ್ಟು 'ಚಿಲ್ಲರೆ ಬೇಡ'ವೆಂದು ಚಟಪಟನೆ ಮೆಟ್ಟಲಿಳಿದ. ಕೆಲ ವರು ವೆಂಕಪ್ಪನನ್ನು ನೋಡಿದರು. ಹುಚ್ಚೆಂದು ಭಾವಿಸಿರಲೂ ಬಹುದು. ತಿರುಗಿ ವೆಂಕಪ್ಪನ ವಸತಿಗೆ ಹೋಗುವಾಗ ಘಂಟೆ ಹತ್ತಾಗಿತ್ತು. ಕಾರು ಇತ್ಯಾದಿಯೆಂದು ೧೦೦ ರೂಪಾಯಿ ಗಳಿಗಿಂತ ಹೆಚ್ಚು ಹಾರಿಹೋಗಿತ್ತು.

ವೆಂಕಪ್ಪನ ವಾಸ ಆ ದೊಡ್ಡ ಮನುಷ್ಯರ 'ಕಿಸೆಖಾರಾ ಹೋಟೇಲಿ'ನಲ್ಲಿ ತಿಂಗಳೊಂದು ಸಾಗಿತು. ಈ ಸಮಯದಲ್ಲಿ ನಾನು ದೊಡ್ಡ ಮನೆ ವೆಂಕಪ್ಪನ ದೊಡ್ಡಸ್ಥಿಕೆಯನ್ನು ಕಂಡುದು ಹಲವು ಬಾರಿ. ಹಣವನ್ನು ನೀರಿನಂತೆ ವೆಚ್ಚ ಮಾಡುತ್ತಿದ್ದ. ಅವನು ಏಕೆ ಮದ್ರಾಸಿಗೆ ಬಂದನೆಂದು ನಾನು ವಿಚಾರಿಸಲಿಲ್ಲ. ಆಗಾಗ ಹಾಸಿಗೆಯಲ್ಲಿ– ಮೇಜಿನ ಮೇಲೆ ಚೆಲ್ಲಿದ್ದ ಮಲ್ಲಿಗೆ ಹೂ, ರೇಸ್ ಪುಸ್ತಕಗಳು ಅವನು ಮದ್ರಾಸಿಗೆ ಬಂದ ಕೆಲಸ ವನ್ನು ಸಾರುತ್ತಿದ್ದುವು.

ಒಂದು ದಿನ 'ಇನ್ಸಾಲ್‌ವೆನ್ಸಿ' (ಪಾಪರಿ) ಕಾನೂನನ್ನು ಉರುಹಾಕುತ್ತ ಸುಮಾರು ಹನ್ನೊಂದೂವರೆ ಘಂಟೆಗೆ ಕುಳಿ ತಿದ್ದೆ. ಬರೇ ಬನಿಯನ್, ಒಂದು ವಸ್ತ್ರ, ಬೆವರಿಳಿದ ಮುಖ. ದೊಡ್ಡ ಮನೆ ವೆಂಕಪ್ಪನ ಮುಖ ಕಾಣಿಸಿಕೊಂಡಿತು. ನನಗೆ ಅವನ ಸ್ಥಿತಿ ನೋಡಿ ಗಾಬರಿಯಾಯಿತು. ಏನೆಂದು ಕೇಳಿದೆ. 'ಹಣವೆಲ್ಲ ಕಳವಾಗಿ ಹೋಯಿತು. ಯಾರಿಗೆ ಹೇಳಲಿ...... ಹೋಟೇಲಿನವರದು ಇನ್ನೂ ೫೦ ರೂಪಾಯಿ ಬಿಲ್ಲು ಬಾಕಿ

ಯುಂತೆ. ನನ್ನ ಪೆಟ್ಟಿಗೆ, ಹಾಸಿಗೆ, ಬಟ್ಟೆ ಸಹ ಕಳಚಿ ಓಡಿಸಿ ಬಿಟ್ಟರು. ನಾನು ಅವರಿಗೆ ಕೊಟ್ಟದ್ದು ಎರಡು ಸಾವಿರದಿಂದ ಮೇಲಾಗಬಹುದು. ಮದ್ರಾಸಿನ ಜನರೇ ಮಹಾ ದುಷ್ಟರು. ದಯೆ–ಕರುಣೆ ಇಷ್ಟಿಲ್ಲ...' ಒಂದೇ ಉಸುರಿನಲ್ಲಿ ವೆಂಕಪ್ಪ ಹೇಳಿಕೊಂಡ. 'ಹಣ ಕದ್ದು ಹೋದದ್ದೇ?' ಎಂದು ನಿಧಾನ ವಾಗಿ ಪ್ರಶ್ನಿಸಿದೆ. 'ಹೌದು. ನಾನು ಸುಳ್ಳು ಹೇಳುವುದಿಲ್ಲ. ಬೇಕಾದರೆ ತಾಯಾಣೆ, ತಂದೆಯಾಣೆ, ದೇವರಾಣೆ ...ಭೂಮಿ ಯಾಣೆ...' ನೂರು 'ಆಣೆ'ಗಳು ಸುರಿದುವು. ನೋಟು–ರೂಪಾಯಿಗಳು ಮುಗಿದ ಬಳಿಕ ಆಣೆಗಳೇ ಗತಿ! ಆಣೆಗಳೂ ಮುಗಿದ ಬಳಿಕ ಪೈಗಳೇ ಗತಿ! ಅದು ಲೋಕದಲ್ಲಿ ಇದ್ದದ್ದೆ ಎಂದುಕೊಂಡೆ! ನನಗೆ ಇದೆಲ್ಲ ಹೊ, ಬಾಟ್ಲಿ, ಕುದುರೆ ಬಾಲಕ್ಕೆ ಹಣ ಕಟ್ಟಿಬಿಟ್ಟ ಪ್ರತಾಪಗಳು ಎಂದು ಚೆನ್ನಾಗಿ ಗೊತ್ತು. 'ಆದದ್ದು ಆಯಿತು. ಈಗೇನುಮಾಡಬೇಕೆಂದಿರುವಿರಿ?' ಎಂದು ಪ್ರಶ್ನಿಸಿದೆ. 'ಏನಾದರೂ ಕೆಲಸ'ವೆಂದ. 'ಈ ಆಸಾಮಿ ಕೆಲಸ ಮಾಡುವುದುಂಟೇ? ಇಲ್ಲಿ ಇದ್ದರೆ ಎಲ್ಲರಿಗೂ ರಗಳೆ' ಎಂದು ಎಲ್ಲ ಯೋಚಿಸುವಾಗ ಮುಂದಟ್ಟಾಯಿತು. 'ನಾನು ಹೇಳುತ್ತೇನೆ ಕೇಳಿ... ನಿಮಗೆ ಅಂಗಿ ತೆಗೆದು ಕೊಡುತ್ತೇನೆ. ಟಿಕೇಟು ತೆಗೆದು ಕೊಡುತ್ತೇನೆ... ಖರ್ಚಿಗೆ ಎರಡು ರೂಪಾಯಿಗಳನ್ನು ಕೊಡುತ್ತೇನೆ. ನೀವು ಊರಿಗೆ ಹೋಗಿ ಬಿಡಿ' ಎಂದೆ. 'ನಿನಗೆ ಏಕೆ ತೊಂದರೆ? ದುಡ್ಡು ಕೊಡು, ನಾನೇ ತೆಗೆದುಕೊಳ್ಳುತ್ತೇನೆ' ಎಂದ. ದುಡ್ಡು ಅವನ ಕೈಯಲ್ಲಿ ಕೊಟ್ಟು ಕಳುಹಿಸಲು ನನಗೆ ಧೈರ್ಯವಿಲ್ಲ. ಅವನಿಗೆ ಅಂಗಿ, ಟಿಕೇಟು ತೆಗೆದುಕೊಟ್ಟು ಎರಡು ರೂಪಾಯಿಗಳನ್ನೂ ಕೊಟ್ಟು ರೈಲಿನಲ್ಲಿ ಕುಳ್ಳಿರಿಸಿದೆ.

ರೈಲು ಹೊರಡುವ ವರೆಗೂ ಅಲ್ಲೇ ನಿಂತೆ. ಬೇರೆ ಯಾರಿಗಾ ದರೂ ಟಿಕೇಟು ಮಾರಿಬಿಟ್ಟಾನು ಎಂಬ ಹೆದರಿಕೆ ನನಗೆ.

ಫಸ್ಟ್ ಕ್ಲಾಸಿನಲ್ಲಿ ಮದ್ರಾಸಿಗೆ ಬಂದ ದೊಡ್ಡಮನೆ ವೆಂಕಪ್ಪ, ಐಯ್ಯರ್ ಹೋಟೇಲ ಸ್ಪೆಶಲ್ ಮಸಾಲೆ ಬಿಟ್ಟ ದೊಡಸ್ಥಿ ಕೆಯ ವೆಂಕಪ್ಪ ಮದ್ರಾಸನ್ನು ಬಿಟ್ಟು ತೆರಳಿದ. ರೈಲಿ ನಲ್ಲಿ ಕುಳಿತುಕೊಂಡೇ ನಾನು ಕೊಟ್ಟ ಎರಡು ರೂಪಾಯಿ ಭಂಡ ವಾಳದಿಂದಲೇ ಹತ್ತಿ ವ್ಯಾಪಾರ ಶುರುಮಾಡಿದ್ದರೂ ಮಾಡಿರ ಬಹುದು.



# ೩. ಪಂಡಿತ
# ರಾಮಕೃಷ್ಣ ದಗಲ್‌ಬಾಜ್

ಪಂಡಿತ ರಾಮಕೃಷ್ಣ ದಗಲ್‌ಬಾಜರನ್ನು ನನಗೆ ಚಿಕ್ಕಂದಿನಿಂದಲೆ ಗೊತ್ತು. ಅವರು ನಮ್ಮ ಮನೆಯ ಹಳೆಯ ಸ್ನೇಹಿತರು. ಸ್ನೇಹಿತರು ಮಾತ್ರವಲ್ಲ ಮನೆಯ ವೈದ್ಯರು (Family doctor). ಅವರ ಬೊಜ್ಜು ಶರೀರ, ಅವರ ನೆರೆತ ಗಡ್ಡ, ಉಷ್ಣವಲಯದ ಕಾಡಿನಂತೆ ಬೆಳೆದ ನಿಡಿದಾದ ಮೀಸೆ, ತಲೆಯಲ್ಲಿರುವ ನಾಲ್ಕು ಕೂದಲು, ಎರಡು ಫೀಟು ಉದ್ದದ ಅವರ ಮಾಂಸ ತುಂಬಿದ ಕಾಲುಗಳು, ಊರೆಲ್ಲ ಸುತ್ತಿ ಬಂದ ಪತ್ರದ ಮೇಲಿನ ಮೊಹರುಗಳಂತೆ ಮೈತುಂಬ ಹರಡಿದ ಗೋಪಿಯ ಮುದ್ರೆಗಳು, ಅವರ ತುಂಡುಗಚ್ಚೆ, ಆದರ ಮೇಲಿನ ನಾಲ್ಕೆಳೆಯ ಬೆಳ್ಳಿಯ ನೇವಳ, ಅವರ ಕೂದಲು ತುಂಬಿದ ಬೆನ್ನು, ಎದೆಗಳ ಮೇಲೆ ಮುಳಿ ಹುಲ್ಲಿನ ಗುಡ್ಡದ ದಾರಿಯಲ್ಲಿ ಸಾಗಿದ ದಾರಿಯಂತೆ ಮಲಗಿದ ಬೆರಳಿನಷ್ಟು ದಪ್ಪದ ಜನಿವಾರ–ಈಗಲೂ ನೆನಪಾಗುತ್ತಿವೆ.

ರಾಮಕೃಷ್ಣ ದಗಲ್‌ಬಾಜರು ಮಹಾ ಪಂಡಿತರೆಂದು ಊರಿನವರಿಗೆಲ್ಲ ಗೊತ್ತು. ಕೆಮ್ಮಿನಿಂದ ಹಿಡಿದು ಸನ್ನಿಪಾತದ ವರೆಗಿನ ಎಲ್ಲಾ ರೋಗಗಳಿಗೂ ಅವರಲ್ಲಿ ಔಷಧವಿದೆ. ಕಲ್ಲುರುಟ್ಟೆ ಗುಳಿಗ, ಲಕ್ಕೇಸರಿಗಳಿಂದ ಹಿಡಿದು ಕುಟ್ಟಿಚಾತ ಪಿಶಾಚಿಯ ಉಪದ್ರವ ತಡೆಯಲೂ ಅವರ ಬಾಯಿಯಲ್ಲಿ ಮಂತ್ರಗಳಿವೆ. ಬೂದಿ ಮದ್ದು ಅವರ ರೋಗಿಗಳು ಧನ್ವಂತರಿಯ ಕೃಪಾಕಟಾಕ್ಷ ಬೇಕಾದರೆ ಉಪಯೋಗಿಸಲೇ ಬೇಕಾದ ವಸ್ತು;

ಅದಿಲ್ಲದೆ ಅವರಿಂದ ಯಾವುದೂ ಸಾಧ್ಯವಿಲ್ಲ. ಎಷ್ಟೋ ಜನರಿಗೆ ಅವರ ಹೆಸರು ಹೇಳಿ ಒಲೆಬೂದಿಯನ್ನು ತಲೆಗೆ ಸುಳಿಸಿದ ಮಾತ್ರದಲ್ಲಿ ರೋಗ ವಾಸಿಯಾದುದೂ ಉಂಟೆಂದು ಹೇಳುತ್ತಾರೆ. ಆದರೆ ಅವರನ್ನು ಮಂತ್ರವಾದಿಗಳೆಂದು ಯಾರೂ ಕರೆಯುವು ದಿಲ್ಲ. ಅಜ್ಜ, ಮುತ್ತಜ್ಜರಿಂದ ಲಾಗಾಯ್ತು ಅವರಿಗೆ ಪಂಡಿತ ನೆಂಬ ಹೆಸರು ಬಳಿವಿಡಿದು ಬಂದಿದೆ.

ಎಂಟು ಹತ್ತು ವರ್ಷಗಳ ಹಿಂದಿನ ಮಾತು. ನನ್ನ ೬೭ ವರ್ಷದ ಅಜ್ಜನಿಗೆ ಶೀತಜ್ವರವಾಯಿತು. ಮೈ ಕೆಂಡದಂತೆ ಕಾಯುತ್ತಿತ್ತು. ನನ್ನ ತಂದೆ ನನ್ನನ್ನು "ಪಂಡಿತರನ್ನು ಕರೆದು ಕೊಂಡು ಬಾ"ಯೆಂದು ಅಟ್ಟಿದರು. ನಾನು ಅವರಲ್ಲಿಗೆ ಹೋದಾಗ ಘಂಟೆ ಸುಮಾರು ಎಂಟಾಗಿತ್ತು. ಪಂಡಿತರು ಮೈ ತುಂಬ ಎಣ್ಣೆ ಹಚ್ಚಿಕೊಂಡು–[ಪಂಡಿತರು 'ಎಣ್ಣೆ' ಹಚ್ಚಿಕೊಳ್ಳು ತ್ತಾರೆಯೇ? ಏನಿದ್ದರೂ 'ತೈಲ'ವಿರಬೇಕು]–ಬೆರಣಿ ತಟ್ಟುತ್ತ ಕುಳಿತಿ ದ್ದರು. ಅವರ ಜನಿವಾರ ಕಿವಿಯ ಮೇಲೆ ಹಾದು ತಲೆಗೆ ಸುತ್ತಿಕೊಂಡಿತ್ತು. ಹತ್ತಿರ ಬರುವಾಗಲೆ ಎಣ್ಣೆಗೆ ಹಾಕಿದ ಬೆಳ್ಳುಳ್ಳಿಯ ವಾಸನೆ ಮೂಗಿಗೆ ಹೊಡೆಯುತ್ತಿತ್ತು. ಕೌಪೀನ ಧಾರಿಗಳಾದ ಪಂಡಿತರು ಅಲ್ಲೇ ಎದ್ದು ನಿಂತು 'ಏನು ಬಂದಿ?' ಎಂದು ವಿಚಾರಿಸಿದರು. ನನ್ನ ವರದಿಯಾದ ಬಳಿಕ, 'ಅದು ಪ್ರಯೋ ಜನವಿಲ್ಲ. ಮದ್ದು ನಾಟಲಿಕ್ಕಿಲ್ಲ' ಎಂದರು. 'ಬಂದು ನೋಡಿ– ಬಳಿಕ ಹೇಳಿ' ಎಂದೆ ನಾನು. 'ಅಯ್ಯೋ ಹುಡುಗ, ಪ್ರಯೋಜನ ವಿಲ್ಲ ಎಂದೆನಲ್ಲ. ನಾನು ಎಣ್ಣೆ ಹಾಕಿಕೊಂಡಿರುವಾಗ ನೀನು ಔಷಧಿಗಾಗಿ ಬಂದ ಲಕ್ಷಣ, ನೀನು ಬಂದ ದಿಕ್ಕಿನ ಲಕ್ಷಣ– ಇವುಗಳಿಂದಲೇ ಔಷಧಿ ಪ್ರಯೋಜನವಿಲ್ಲವೆಂಬುದು ನಿಶ್ಚಯ.

ಸುಮ್ಮನೆ ಯಾಕೆ ಬರಬೇಕು ಹೇಳು? ನಾನು ಬರುವುದಿಲ್ಲ' ವೆಂದರು ಅವರದಕ್ಕೆ. 'ಆಯುಸ್ಸು ಸಂದಿದೆ' ಎಂದು ಪಂಡಿತರು ಹೇಳಿದ ಬಳಿಕ ಹತ್ತಿರದ ವೈದ್ಯನನ್ನು ಬಿಟ್ಟು ಹೋಗಲು ಯಾರಿಗೆ ಮನಸ್ಸು ಬಂದೀತು? 'ನೀವು ಬರಲೇ ಬೇಕೆಂ'ದೆ. 'ಆಯಿತು; ನಾನು ಸ್ನಾನ ಮಾಡಿ ಬರುತ್ತೇನೆ. ಬಳಿಕ ಹೋಗುವ' ಎಂದು ಅವರೆದ್ದು ಸ್ನಾನಕ್ಕೆ ಹೋದರು.

ಅವರ ಪತ್ನಿ ಒಂದು ಲೋಟ 'ಕಾಚಿ ಕಷಾಯ' ತಂದು ಕೊಟ್ಟರು. ಅದನ್ನು ಕುಡಿದು ನಾನು ಜಗಲಿಯ ಮೇಲೆ ಕುಳಿತೆ. ಘಂಟೆ ಹನ್ನೊಂದು ಆಗಿರಬಹುದಾದರೂ ಪಂಡಿತರಿಗೆ ಸ್ನಾನ ಮುಗಿಯುವ ಲಕ್ಷಣವೇ ಕಾಣಿಸಲಿಲ್ಲ. ಬಚ್ಚಲಿನಿಂದ ಧಡಧಡನೆ ನೀರೆರೆದುಕೊಳ್ಳುತ್ತಿರುವುದು ಕೇಳುತ್ತಿತ್ತು. ಕುಳಿತು ಕುಳಿತು ನನ್ನ ಕಾಲು ನೋಯತೊಡಗಿತು. 'ಓ ಪಂಡಿತರೇ' ಎಂದು ಕಿರಿಚಿದೆ. 'ಆಯಿತು ಬಂದೆ' ಎಂದು ಓಗುಟ್ಟಿ ಪಂಡಿತರು ಅರ್ಧ ಘಂಟೆಯ ಬಳಿಕ ದಾಳಿಂಬೆ ಹಣ್ಣಿನಂತೆ ಕೆಂಪಾಗಿ ಹೊರಗೆ ಬಂದರು. 'ಒಂದಿಷ್ಟು ಜಪ ಮಾಡಿ ಬಿಡುತ್ತೇನೆ. ತಿರುಗಿ ಬರುವಾಗ ಬಹಳ ಹೊತ್ತಾಗುತ್ತದೆ' ಎಂದರು. 'ಹುಂ' ಎಂದೆ.

ಪಂಡಿತರ ಜಪ, ಪೂಜೆಗಳು 'ಆಪೋಯಿಷ್ಠಾ—ಮಯೋಭುವ'ಗಳ ಮಧ್ಯೆ ಹೆಂಡತಿಗೆ 'ಅದು ಸರಿಯಾಗಲಿಲ್ಲ–ಇದು ಸರಿಯಾಗಲಿಲ್ಲ' ಎಂದು ಬೈಯುತ್ತ ಸಾಂಗವಾಗಿ ನೆರವೇರಿದುವು.

'ಏ ಹುಡುಗ! ಊಟಕ್ಕೆ ಆಗಿದೆ. ಮುಗಿಸಿಬಿಟ್ಟು ಹೋಗುವ' ಎಂದರು ಪಂಡಿತರು. ನಾನು 'ಊಟ ಮಾಡುವುದಿಲ್ಲ'ವೆಂದೆ. 'ಅದೆಲ್ಲ ಆಗುವುದಿಲ್ಲ; ಮಧ್ಯಾಹ್ನ ಹೊತ್ತಿಗೆ

ಬಂದವರು ಹಾಗೇ ಹೋಗುವ ಕ್ರಮವಿಲ್ಲ. ಕಾಲು ತೊಳೆ' ಎಂದರು. ಹೇಗಾದರೂ ಒಮ್ಮೆ ಈ ಪಂಡಿತರನ್ನು ಕರೆದು ಕೊಂಡು ಹೋದರೆ ಸಾಕೆಂದು, ನಾನು ಬೆಳಗ್ಗೆಯೇ ಬಂದಿರು ವೆನೆಂದು ಪಂಡಿತರಿಗೆ ನೆನಪು ಮಾಡಿ ಕಾಲು ತೊಳೆದೆ.

ಊಟ ಮಾಡಿ ವೀಳ್ಯ ಹಾಕಿ ಪಂಡಿತರು ತಮ್ಮ ಹಳೆಯ ಮೆಟ್ಟುಗಳಿಗೆ ಕಾಲು ಕೊಟ್ಟರು. ಅದಕ್ಕೆ ಸರಿಯಾಗಿ ಈಶಾನ್ಯ ದಿಂದ ಒಂದು ಹಲ್ಲಿ "ಚಿಪ್ ಚಿಪ್" ಎಂದಿತು. 'ಏನು ಪ್ರಯೋ ಜನವಿಲ್ಲವೆಂದೆನಲ್ಲ. ಕೇಳಿದೆಯ ಗೌಳಿ ಶಕುನ?' ಎನ್ನುತ್ತ ಪಂಡಿ ತರು ಜಿಂಚಿನಲ್ಲಿ ಬಂದು ಕುಳಿತರು. ಹೊರಬಿದ್ದ ನಾನೂ ಕುಳಿತೆ.

'ನಾನು ಬರುವುದಿಲ್ಲವೋ— ರೋಗದ ಚಿನ್ಹೆಗಳನ್ನು ಹೇಳು. ಔಷಧಿ ಬರೆದು ಕೊಡುತ್ತೇನೆ!' ಪಂಡಿತರು ಹೇಳಿ ದರು. 'ಔಷಧಿ ಬೇಕಾದರೆ ಬರೆದು ಕೊಡಿರಿ. ನೀವು ಬರಲೇಬೇಕು' ಎಂದೆ ನಾನು. ರೋಗದ ಚಿನ್ಹೆಗಳನ್ನು ತಿಳಿದು ಕೊಂಡು ಪಂಡಿತರು ಸಂಸ್ಕೃತ, ಮಲೆಯಾಳ ಗ್ರಂಥಗಳನ್ನು ತಿರುವಿ, ಒಂದು ಹರುಕು ಕಾಗದದಲ್ಲಿ ಔಷಧಿಪಟ್ಟಿ ತಯಾ ರಿಸಿ ನನ್ನ ಕೈಗಿತ್ತರು.

ನಾನು ಅದನ್ನು ಓದಿ ನೋಡಿದೆ. ಪ್ರಪಂಚದಲ್ಲಿರುವ ಸೊಪ್ಪೆಲ್ಲವೂ ಅದರಲ್ಲಿ ಬರೆದಂತೆ ಕಂಡಿತು. ಆ ಬೇರು, ಆ ನಾರು, ಆ ಬೀಜ, ಆ ಹೂ—ಅವನ್ನು ಕೊಂಡು... ತಲಾಸು ಮಾಡಿ ಔಷಧಿ ಮಾಡಬೇಕಾದರೆ ತಿಂಗಳು ಒಂದಿದ್ದರೂ ಸಾಲ ದೆನಿಸಿತು. ಬೂದಿಯ ಪೊಟ್ಟಣ ಕೊಡಲು ಮರೆಯಲಿಲ್ಲನೆಂದು ಹೇಳಬೇಕಿಲ್ಲ.

ಪಂಡಿತರನ್ನು 'ಬರಲೇಬೇಕೆ'ಂದು ನಾನು ಹಠ ಹಿಡಿದೆ. ಅವರು ಬರುವುದಿಲ್ಲವೆಂದು ಕುಳಿತುಕೊಂಡರು. ಅರ್ಧ ಘಂಟೆ ಚರ್ಚೆ ನಡೆಯುವಷ್ಟರಲ್ಲಿ ಪಂಡಿತರ ಹೆಂಡತಿಯ ಸವಾರಿ ಬಂತು. 'ಹುಡುಗ ಬೆಳಗ್ಗೆಯೇ ಬಂದಿದ್ದಾನೆ. ಒಮ್ಮೆ ಹೋಗಬಾರದೇ' ಎಂದು ಅವರದು ನನ್ನ ಕಡೆಯಿಂದ ವಕಾಲತ್ತಾಯಿತು. 'ಆಯ್ತಪ್ಪ, ಹೋಗುವ ಹಾಗಾದರೆ' ಎನ್ನುತ್ತ ಪಂಡಿತರು ಎದ್ದರು. ಯಜಮಾನಿಯೊಂದಿಗೆ ಒಳಗಿನಿಂದ ಬಂದಿದ್ದ ಬೆಕ್ಕು 'ಮ್ಯಾಂ' ಎನ್ನುತ್ತ ಅಡ್ಡ ಬಂತು. ಅದನ್ನು ಕೆಕ್ಕರಿಸಿ ನೋಡುತ್ತ ಪಂಡಿತರು ಮೆಟ್ಟಲಿಳಿದು ಭರಭರನೆ ನನ್ನೊಡನೆ ನಡೆಯತೊಡಗಿದರು.

ನಾವು ಆರು ಘಂಟೆಗೆ ನನ್ನ ಮನೆ ಸೇರುವಾಗ ನಿಜವಾಗಿಯೂ 'ಪ್ರಯೋಜನವಿರಲಿಲ್ಲ'.



# ೪. ರಂಗಪ್ಪಯ್ಯ

ರಂಗಪ್ಪಯ್ಯ ನನ್ನ ಸಹಪಾಠಿ. ಒಂದೇ ಹಾಸ್ಟೇಲಿನಲ್ಲಿ ನಾವಿಬ್ಬರೂ ವಾಸವಾಗಿದ್ದವರು. ಈಗ ಅವನು ಮೃತನಾಗಿ ನಾಲ್ಕು ವರ್ಷಗಳು ಸಂದುಹೋದರೂ ಅವನ ನೆನಪಿನ್ನೂ ಮಾಸದೆ ಉಳಿದಿದೆ. ನನಗೆಂದೇನು? ಅವನನ್ನು ತಿಳಿದವರು ಯಾರೂ ಅವನನ್ನು ಮರೆಯಲಾರರು. ಅವನ ಆಚಾರ— ವಿಚಾರ, ಅವನ ಸರಳತನ, ಅವನ ಖ್ಯಾನೆ 'ಟ್ರೀಟ್‌ಮೆಂಟ್', ಅವನ ಮೌನ ವ್ರತ ಒಂದೊಂದೇ ಸಾಕು ಅವನನ್ನು ನೆನಪಿನಲ್ಲಿಡಲು.

ರಂಗಪ್ಪಯ್ಯ ಶುದ್ಧ ಗಾಂಧೀವಾದಿ. ಅವನ ತಂದೆ ದೊಡ್ಡ ಜಮೀನುದಾರರಾದರೂ, ಅವರ ವರಮಾನ ಹೇಗಿದ್ದರೂ ಒಂದು ಲಕ್ಷಕ್ಕೆ ಮಿಕ್ಕಬಹುದಾದರೂ, ಅವನ ಉಡುಪು ಬಹಳಸಾದಾ. ಅಪ್ಪಟ ಖಾದಿ. ಉತ್ತಮ ಖಾದಿ ಸಿಲ್ಕಿನ ಅಂಗಿ, ಅರ್ಧ ಇಂಚು ಜರಿಯ ಪಂಚೆ, ತಲೆಯ ಮೇಲೆ ಗಾಂಧಿ ಟೊಪ್ಪಿ, ಕಾಲಿಗೆ ತೆಳ್ಳಗಿನ ಬಾಟಾ ಚಪ್ಪಲಿ. ಈಗಿನ ಕಾಲದಲ್ಲಿ ಅವನ ಉಡುಪಿಗೆ ೫೦–೬೦ ರೂಪಾಯಿಗಳಷ್ಟು ಬೀಳಬಹುದಾದರೂ, ಅದು ಬಹಳ ಸಾದಾ. ಸಿಲ್ಕಿನದಾದರೂ ಶುದ್ಧ ಖಾದಿ. ಗಾಂಧಿಯವರು ಉಡುಪು ಸಾದಾ ಆಗಬೇಕೆಂದು ಹೇಳಿದ್ದರಲ್ಲವೆ? ಸಿಲ್ಕಿನದು ಆಗಬಾರದೆಂದು ಹೇಳಿದ್ದಾರೆಯೆ? ಖಾದಿ ಷರಾಯಿ (Pants) ಹಾಕಬಹುದಂತೆ! ಖಾದಿ ಹೇಟ್ (Hat) ಇಡ

ಬಹುದಂತೆ! ಬಳಿಕ, ಸಿಲ್ಕಿನ ಶರ್ಟು ಹಾಕಿದರೆ ಖಾದಿ ಸನ್ಯಾಸಕ್ಕೆ ಯಾವ ಕೊರತೆ?

ರಂಗಪ್ಪಯ್ಯನ ಹೃದಯ ಮಹಾತ್ಮರಿಗಿಂತಲೂ ಹೆಚ್ಚು ಸರಳ. ತಾನು ಶ್ರೀಮಂತರ ಮಗನೆಂಬ ದುರಭಿಮಾನ ಅವನಲ್ಲಿ ಎಳ್ಳಷ್ಟೂ ಇಲ್ಲ. ಹಾಸ್ಟೇಲಿನ ಅಡಿಗೆಯವರಿಂದ ಹಿಡಿದು 'ವಾರ್ಡನ'ರ ತನಕ ಅವನ ಹಣಕ್ಕೆ ಕೈಚಾಚದವರಿಲ್ಲ. ಸಹಪಾಠಿಗಳು, ಗೆಳೆಯರು ವಾರಕ್ಕೆ ಒಂದು ಕಾಫಿಯನ್ನಾದರೂ ಅವನಿಂದ ಗಿಟ್ಟಿಸಿಕೊಳ್ಳುವವರೆ. ಇಷ್ಟೊಂದು ಉದಾರಿಯಾದರೂ ಅವನಿಗೆ ಒಂದು ಹಸ್ತಕ (Guide) ಬೇಕಾದರೆ ಕೊಡುವ ಪುಣ್ಯಾತ್ಮರಿಲ್ಲ. ಇದಕ್ಕೆ ನಾನೊಬ್ಬನು ಹೊರತು ಎನ್ನುವ. ಆದರೆ ಅವನಿಗೆ ಸೇಡಿನ ಅಪೇಕ್ಷೆ ಇಲ್ಲ. ಉಪಕಾರ ಹೊಂದಿದವರು ಪ್ರತ್ಯುಪಕಾರ ಮಾಡಲಿಲ್ಲವೆಂಬ ಬೇಸರವಿಲ್ಲ. ರಂಗಪ್ಪಯ್ಯ, ಬೇರೆಯವರು ಕೃತಜ್ಞರಾಗಿರಲಿ-ಬಿಡಲಿ, ಅವನಿಂದ ಆಗುವ ಉಪಕಾರವನ್ನು ಮಾಡಿಯೇ ಮಾಡುತ್ತಾನೆ.

ರಂಗಪ್ಪಯ್ಯನ ಖ್ಯಾನೆ ನಮಗೆಲ್ಲರಿಗೂ ಒಂದು ನಗೆಯ ಕಥೆ. ಡಾಕ್ಟರ್ ಖ್ಯಾನೆಯವರ ಕ್ರಮ ನನಗೆ ತಿಳಿಯದು. ನಾವೆಲ್ಲ ಅವನ ಕ್ರಮಕ್ಕೆ 'ರಂಗಪ್ಪಯ್ಯನ ಖ್ಯಾನೆ' ಎನ್ನುವುದು ವಾಡಿಕೆ. ಅವನ ಖಾಹಿಲೆಗಳಿಗೆಲ್ಲ ನೀರು ಮಣ್ಣುಗಳೇ ಔಷಧಿ. ನಿಮೋನಿಯಕ್ಕೆ ಎದೆಗೆ ಮಣ್ಣಿನ ಪೋಲ್ಟೀಸು, ತಲೆ ಸಿಡಿತಕ್ಕೆ ಹಣೆಗೆ ಪೋಲ್ಟೀಸು, ಹೊಟ್ಟೆ ನೋವಿಗೆ ಹೊಟ್ಟೆಗೆ ಕರೀ ಮಣ್ಣಿನ ಪೋಲ್ಟೀಸು, ಕಾಲು ಸೆಳೆತವಾದರೆ ಎಮ್ಮೆಯಂತೆ ಮೂರು ಘಂಟೆಗಳ ಕಾಲ ನೀರಿನಲ್ಲಿ ಕುತ್ತಿಗೆಯ ತನಕ ಬಿದ್ದುಕೊಳ್ಳುವುದು, ಶೀತವಾದರೆ ಮೂಗಿನ ಬಲಸೊಳ್ಳೆಯಿಂದ ನೀರು

ತೆಗೆದುಕೊಂಡು ಎಡಸೊಳ್ಳೆಯಿಂದ ಬಿಡುವುದು. ಒಂದು ದಿನ ರಂಗಪ್ಪಯ್ಯನನ್ನು ಬೇಗ್ಗೆ ಎದ್ದಂತೆ ಕಂಡೆ. ಮೈಗೆ ಹುಲಿ ವೇಷಹಾಕಿದಂತೆ ಕೆಂಪು ಮಣ್ಣನ್ನು ನೀರಿನಿಂದ ಕಲಸಿ ಮೆತ್ತಿ ಕೊಂಡಿದ್ದ. 'ಏನೋ ರಂಗಪ್ಪ ಇದು ವೇಷ?' ಎಂದು ಕೇಳಿದೆ. 'ಮೈಯೆಲ್ಲ ಸೊಳ್ಳೆ ಕಡಿದು ಜ್ವರಬರುವಂತೆ ಆಗಿದೆ' ಎಂದ. ಅವನಿಂದ ವಾರಕ್ಕೆ ಎರಡು ಕಾಫಿಗಳನ್ನಾದರೂ ಕಸಿದ ಆಸಾಮಿ ಗಳೆಷ್ಟೋ 'ಏನು ಆಸೆಯಪ್ಪ ಈ ರಂಗಪ್ಪನಿಗೆ. ಡಾಕ್ಟರರು ಒಂದೇ ದಿನದಲ್ಲಿ ಜ್ವರ ಇಳಿಸುವ ಔಷಧಿ ಕೊಡುವುದಿಲ್ಲವೇ? ಸುಮ್ಮನೆ ಮಣ್ಣು ತೆಗೆದು ಆಡುವ ಸ್ಥಳದಲ್ಲೆಲ್ಲ ಗುಂಡಿ ತೋಡಿ ಇಡು ತ್ತಾನೆ' ಎಂದರು.

ಅವನು ಆಟದ ಮೈದಾನಿನಲ್ಲಿ ಗುಂಡಿ ತೋಡಿ ಉಪದ್ರವ ಕೊಡುವುದು ಸುಳ್ಳಲ್ಲ. ನಮ್ಮ ವ್ಯಾಯಾಮ ಖಾತೆಯ ಪ್ರೊಫೆಸರ ರೊಬ್ಬರು ರಂಗಪ್ಪನ ಖ್ಯಾನೆಯಿಂದಾಗಿ ಕಾಲು ಮುರಿದು ಕೊಂಡಿದ್ದಾರೆ. ಒಂದು ದಿನ ಡ್ರಿಲ್ ನಡೆಯುತ್ತಿತ್ತು. ಒಬ್ಬ ಹುಡುಗ ನೆಲ ನೋಡಿಕೊಂಡು 'ಎಡ-ಬಲ' ಕಾಲುಹಾಕುತ್ತಿದ್ದ. ಪ್ರೊಫೆಸರರಿಗೆ ತುಸು ರೇಗಿತು. "ಏನಯ್ಯಾ ಬಂಗಾರ ಹುಡುಕಿ ಕೊಂಡು ನಡೆಯುತ್ತಿ...ನೆಟ್ಟಗೆ ಮುಖ ಮಾಡಿಕೊಂಡು ಕಾಲು ಹಾಕಬೇಕು, ಹೀಗೆ" ಎಂದು ಡಬಡಬನೆ ಹಜ್ಜೆ ಹಾಕಿದರು. ಹತ್ತು ಹಜ್ಜೆಗಳನ್ನು ಹಾಕಿದ್ದರೋ ಇಲ್ಲವೋ-'ಅಯ್ಯಬ್ಬ' ಎಂದು ಹೊರಳಿದರು. ನೋಡಿದರೆ ಪ್ರೊಫೆಸರರ ಕಾಲು ಒಂದು ಗುಣಿಯೊಳಗೆ ಹೊಕ್ಕು ಹೋಗಿತ್ತು. ರಂಗಪ್ಪಯ್ಯನ ಖ್ಯಾನೆ ಗುಣಿಯಾಗಿತ್ತದು. ಅಜೀರ್ಣವಾದುದಕ್ಕೆ ಒಂದು ಫೀಟು ಆಳದ ಗುಣಿತೋಡಿ ಮಣ್ಣು ತೆಗೆದು ಎರಡು ಚಮಚ ಮುಕ್ಕಿದ್ದ.

ಪ್ರೊಫೆಸರರನ್ನು ಎತ್ತಿಕೊಂಡು ನಾವು ಹೋಗಬೇಕಾಯಿತು. ರಂಗಪ್ಪಯ್ಯ 'ನಾನು ಅದಕ್ಕೆ ಮದ್ದುಕೊಡುತ್ತೇನೆ' ಎಂದು ಅದರೊಳಗಿನಿಂದಲೆ ಒಂದು ಹಿಡಿ ಮಣ್ಣು ತೆಗೆದುಕೊಂಡು ಬಂದ. ನಾವು 'ನಡೆಯುತ್ತಿಯೋ, ಇಲ್ಲವೋ? ಮಾಡಿದ ಉಪಕಾರವೇ ಸಾಕು' ಎಂದು ಅವನನ್ನು ಓಡಿಸಿ ಬಿಟ್ಟೆವು. ಆದರೆ ಅವನಿಗೆ ಧನ್ಯವಾದಗಳೂ ದೊರೆತುವು. ಪ್ರೊಫೆಸರರ ಕಾಲು ಸರಿಯಾಗುವ ತನಕ (ಒಂದು ತಿಂಗಳ ಕಾಲ) ಆ ಕ್ಲಾಸಿಗೆ ಹಾಜರಿ ಸಹಿತ ರಜೆ ಸಿಕ್ಕಿತು.

ವಾರಕ್ಕೆ ಒಂದು ಬಾರಿ—ಪ್ರತಿ ಆದಿತ್ಯವಾರ ರಂಗಪ್ಪನಿಗೆ ಮೌನ ವ್ರತ. ಒಂದು ಪೆನ್ಸಿಲು, ಒಂದು ಚೂರು ಕಾಗದ—ಆ ದಿನ ಎಲ್ಲಿ ಹೋಗುವುದಿದ್ದರೂ ಕೊಂಡು ಹೋಗುತ್ತಾನೆ. ರಂಗಪ್ಪನ ಸವಾರಿ ಒಂದು ಆದಿತ್ಯವಾರ ಕ್ರಿಸ್‌ಮಸ್ ರಜೆ ಮುಗಿಯುವ ಮೊದಲೆ ಮಂಗಳೂರಿಗೆ ಬಂತು. ಹಾಸ್ಟೇಲು ತೆರೆದಿರಲಿಲ್ಲ. ವಿದ್ಯಾರ್ಥಿಗಳೆಲ್ಲ ರಜೆಗೆ ಮನೆ ಹೋಗಿದ್ದರು. ಹಾಗಾಗಿ ರಂಗಪ್ಪನಿಗೆ ಹೊಟೇಲಿಗೆ ಹೋಗದೆ ಗತ್ಯಂತರವಿರಲಿಲ್ಲ. 'ಅಂಬಾ ಭವನ'ಕ್ಕೆ ಹೋದ. ಕಿಸೆಗೆ ಕೈಯಿಕ್ಕುತ್ತಾನೆ—ಪೆನ್ಸಿಲು ಕಾಗದ ಮರೆತುಹೋಗಿತ್ತು. ಏನೆಂದು ಹೊಟೇಲು ಮಾಣಿ ಕೇಳಿದ. ರಂಗಪ್ಪ ಬಾದಾಮ್ ಹಲ್ವಕ್ಕೆ ಕೈತೋರಿಸಿದ. ಮಾಣಿ ಹಲ್ವದ ಬದಿಗಿರುವ ಬೋಂಡ ತಂದು ಕೊಟ್ಟ. 'ಇದಲ್ಲ...ಇವಲ್ಲ...' ಎನ್ನುವ ರೀತಿಯಲ್ಲಿ ರಂಗಪ್ಪ ಕೈ ಮೊಗಚಿದ. ತುಂಬ ಜನರಿದ್ದರು. ಮಾಣಿ ದಣಿದಿದ್ದ. ಅವನಿಗೆ ಮನಸ್ಸಿನಲ್ಲೆ ಸಿಟ್ಟು ಕುದಿಯತೊಡಗಿತು. 'ಇದೊಂದು ಶನಿ ಎಲ್ಲಿಂದ ಬಂತಪ್ಪ' ಎಂದು ಗೊಣಗಿಕೊಂಡು ಹೊರಟು ಹೋದ.

ಹತ್ತು ನಿಮಿಷವಾದರೂ ಇವನ ಬಳಿಗೆ ಸುಳಿಯಲಿಲ್ಲ. ಬಳಿಕ ರಂಗಪ್ಪನೇ ಕಪಾಟಿನ ಬಳಿಗೆ ಹೋಗಿ ತನಗೆ ಬೇಕಾದ್ದನ್ನು ತೋರಿಸಬೇಕಾಯಿತು. ಹಲ್ವ ತಿಂದಾದ ಬಳಿಕ ಕಷ್ಟಪಟ್ಟು 'ಸ್ಪೆಷಲ್ ಮಸಾಲೆ' ತರಿಸಿದ. ಅದನ್ನು ತಿನ್ನುವಾಗ ಕಣ್ಣನ್ನು ಸುತ್ತಲೂ ಹೊರಳಿಸಿದ. ಯಾರೂ ಗುರುತಿನವರು ಬಂದಂತೆ ಕಾಣಲಿಲ್ಲ. ಯಾರಾದರೂ ಗುರುತಿನವರು ನೋಡಿಯಾರೆಂದು ಒಂದೇ ಉಸಿರಿಗೆ ತಿಂದು ಮುಗಿಸಿದ. ಅದೇನು ಹಾಗೆ ಮಾಡಲು ಕಾರಣ? ಎಂದು ನೀವು ಪ್ರಶ್ನಿಸಬಹುದು. ಮತ್ತೇನಿಲ್ಲ. ರಂಗಪ್ಪಯ್ಯ ಉಪ್ಪು, ಮೆಣಸು, ಹುಳಿ ಇತ್ಯಾದಿ ಹಾಕಿದ ಪದಾರ್ಥಗಳನ್ನು ಎಲ್ಲರ ಎದುರಿನಲ್ಲಿ ತಿನ್ನುವುದಿಲ್ಲ. ಖ್ಯಾನೆ ಪಂಥದವರು ಮೆಣಸು ತಿನ್ನುತ್ತಾರೆಯೆ? ಅವನಿಗೆ ಹಾಸ್ಟೇಲಿನಲ್ಲೂ ಬೇರೆಯೇ ಅಡಿಗೆ. ಅಲ್ಲಿಯ ಅಡಿಗೆಯವನಿಗೆ ಸ್ವಲ್ಪ ಹಣ ಕೊಟ್ಟು ಪ್ರತ್ಯೇಕ ಅಡಿಗೆ ಮಾಡಿಸುತ್ತಾನೆ. ಆದರೂ ನಾಲಿಗೆ ಚಪಲ ತಡೆಯುವುದು ಸುಲಭವೆ? ಒಮ್ಮೊಮ್ಮೆ ಗುರುತಿಸವರು ಬಾರದ ಹೋಟೇಲಿಗೆ ನುಗ್ಗಿ ಚೆನ್ನಾಗಿ ಮಸದಣಿಯೆ ಮಸಾಲೆ ದೋಸೆ ಇತ್ಯಾದಿಗಳನ್ನು ತಿಂದು ಬರುತ್ತಾನೆ, ಅಷ್ಟೆ. ತಿಂಡಿ ತಿಂದಾದ ಬಳಿಕ 'ಒಂದು ಗ್ಲಾಸು ಕಾಫಿ ಕೊಡು' ಎಂದು ಕೈಸನ್ನೆ ಮಾಡಿದ (ರಂಗಪ್ಪನ ಖ್ಯಾನೆಗೆ ಕಾಫಿ ಹೊರತು ಮಿಕ್ಕದೆಲ್ಲ ಪಥ್ಯ). ಪುನಃ ಅದೇ ರಗಳೆ. ಒಂದು ಬೆರಳನ್ನು ರಂಗಪ್ಪ ತೋರಿಸಿದರೆ ಮಾಣಿಗೆ ಕಾಫಿಯೋ, ಚಾವೋ, ಹಾಲೋ, ಓವಲ್ಟಿನೊ... ಹೇಗೆ! ಗೊತ್ತಾಗಬೇಕು? ಒಂದೊಂದಾಗಿ 'ಕೋಲ್ಡ್, ಓವಲ್ಟೀನು, ಕೊಕ್ಕೊ, ಕ್ರಷ್'... ಎಂದು ಹೇಳತೊಡಗಿದ. ಕಾಫಿಯು ಸರದಿ ಬರುವಾಗ ರಂಗಪ್ಪನ ತಲೆ ಅಲ್ಲಾಡಿತು. ಜನ

ರೆಲ್ಲರೂ ರಂಗಪ್ಪನನ್ನೇ ನೋಡುತ್ತಿದ್ದರು. ಅವರಲ್ಲೊಬ್ಬರು ರಂಗಪ್ಪನನ್ನು ಸೂಕ್ಷ್ಮವಾಗಿ ಪರೀಕ್ಷಿಸುವಂತೆ ನೋಡುತ್ತಿದ್ದರು. ಅವರು ರಂಗಪ್ಪನ ತಂದೆಯ ಕೈಯಲ್ಲಿ ಅವರ ಮಗಳ ಜಾತಕ ವನ್ನು ರಂಗಪ್ಪನಿಗೆ ಅವಳನ್ನು ಧಾರೆಯೆರೆಯುವ ಯೋಚನೆ ಯಿಂದ ಕೊಟ್ಟಿದ್ದರೆಂದೂ, ಅವರಿಗೆ ರಂಗಪ್ಪನನ್ನು ನೋಡಿ ಮಾತ್ರ ತಿಳಿದಿತ್ತೆಂದೂ, ಆ ದಿನ ರಂಗಪ್ಪನನ್ನು ಕಂಡ ಅವರು ಅವನು ಮೂಕನೆಂದು ಯೋಚಿಸಿ ಅವರ ಸುಂದರ, ಬಹಳ ಜಾಣೆ, ಕೋಕಿಲ ಕಂಠೆ, ಕೈತೊಳೆದು ಮುಟ್ಟಬೇಕಾದ ಮಗಳು ಕಲಾ ಕುಮಾರಿಯನ್ನು ಬೇರೆಯವರಿಗೆ ಧಾರೆಯೆರೆದರೆಂದೂ ಹಿಂದಿನಿಂದ ರಂಗಪ್ಪನಿಗೆ ತಿಳಿದುಬಂತು. ಅಂದಿನಿಂದ ರಂಗಪ್ಪಯ್ಯ ತನ್ನ ಮೌನ ವ್ರತಕ್ಕೆ ಪೂರ್ಣವಿರಾಮ ಹಾಕಿದ.

ಇಂಥ ರಂಗಪ್ಪ, ನಾಲ್ಕು ವರ್ಷಗಳ ಹಿಂದೆ ಫಕ್ಕನೆ ಮೃತನಾದ. ಆ ಗೆಳೆಯನ ನೆನಪು ಮಾತ್ರ ಅಚ್ಚಳಿಯದೆ ನಿಂತಿದೆ.



# ೫. ನನ್ನ ಗೆಳೆಯ-ತಿರುಪತಿ

ಅವನನ್ನು ಗೊತ್ತಿಲ್ಲವೇ—ಅವನನ್ನು? ನನ್ನ ಗೆಳೆಯ ತಿರುಪತಿಯನ್ನು? ಪಾಪದ ಮನುಷ್ಯ. ನೋಡಿದರೆ ಮರುಕವಾಗುತ್ತದೆ.

ಒಂದು ದಿನವಾದರೂ ಫುಲ್ ಸೂಟ್ ಹಾಕಲು ಅವನು ಮರೆತದ್ದುಂಟೆ? ಮರವೆ ಅವನ ಹುಟ್ಟುಗುಣ. ಆದರೆ ಮದ್ರಾಸಿನಲ್ಲಿ ೧೧೦° ಡಿಗ್ರಿ ಸೆಕೆ ಆದರೂ ಇದೊಂದು ವಿಷಯದಲ್ಲಿ ಅವನಿಗೆ ಎಲ್ಲಿಲ್ಲದ ನೆನಪು. ಎಲ್ಲಿಯಾದರೂ ಹೋಗುತ್ತಿದ್ದಾಗ ನಿಲ್ಲಿಸಿ ಕೇಳಿರಿ, 'ಎಲ್ಲಿಗೆ' ಎಂದು! ತಟ್ಟನೆ 'ಟ್ರಿಪ್ಲಿಕೇನಿಗೆ' ಎಂದುಬಿಡುತ್ತಾನೆ. ಮೂರು ನಿಮಿಷ ಮಾತಾಡಿಸಿ ಬಳಿಕ 'ಎಲ್ಲಿಗೆ' ಎಂದು ಪುನಃ ಕೇಳಿದರೆ 'ಜಾರ್ಜ್‌ಟೌನಿಗೆ' ಎಂದು ಆ ಬದಿಗೆ ಸರಸರನೆ ಹೋಗಿ ಬಿಡುತ್ತಾನೆ. ಊಟಕ್ಕೆಂದು ಹೊರಟವನು ಮರದ ಸಾಮಾನಿನ ಅಂಗಡಿಗೆ ನುಗ್ಗಿ 'ಅರೆ ಪ್ಲೇಟ್ ಬಿರಿಯಾನಿ ಲಾವ್ರೋ' ಎಂದರೂ ಎಂದ. ಒಂದು ದಿನ ದೊಡ್ಡ ಎರಡು ಪುಸ್ತಕಗಳನ್ನು ಹಿಡಿದುಕೊಂಡು 'ಯೂನಿವರ್ಸಿಟಿ'ಗೆ ಹೋಗುತ್ತಿದ್ದ. ನನಗೆ ನೋಡಿದೊಡನೆ ನಗೆ ಬಂತು. ಗೊಳ್ಳೆಂದು ನಕ್ಕೆ. ಅವನಿಗೆ ಸ್ವಲ್ಪ ಸಿಟ್ಟು ಬಂತೆಂದು ಕಾಣುತ್ತದೆ. 'ಯಾಕೆ ನಗುತ್ತೀಯ?' ಎಂದು ದಟ್ಟಿಸಿದ. ನನ್ನ ನಗೆಯಲ್ಲಿ ನನಗೆ ಮಾತನಾಡುವುದೇ ಕಷ್ಟವಾಗಿತ್ತು. ಅವನ ಕೈಹಿಡಿದು ಅವನ ಮೂಗಿನ ಹತ್ತಿರ ಬಾಯಿಯ ಮೇಲೆ ಒರಸಿದೆ. ಅವನಿಗೆ ತಿಳಿಯಿತು. ಒಂದು ಬದಿಯ ಮೀಸೆ ಮಾತ್ರ ಬೋಳಿಸಿದ್ದ.

ಇನ್ನೊಂದು ಬದಿಯುದು ಹಾಗೆಯೇ ಇತ್ತು...'ಅಯ್ಯೋ ಮಹಾರಾಯರೆ ಆ ದರಿದ್ರ ಕನ್ನಡಿ' ಎಂದು ಓಡಿಯೇಬಿಟ್ಟ.

ಬೆಳಗಿನಿಂದ ಸಂಜೆಯ ತನಕ ಯೂನಿವರ್ಸಿಟಿ ಲೈಬ್ರೆರಿಯಲ್ಲಿ ಕುಳಿತಿರುತ್ತಾನೆ. 'ಯಾವುದಕ್ಕೆ ಓದುತ್ತಿಯಾ' ಎಂದು ಕೇಳಿದರೆ, ಒಮ್ಮೆ 'ಸ್ಟೇಟಸ್ಟಿಕ್ಸ್', ಇನ್ನೊಮ್ಮೆ 'ಯಮ್.ಯಸ್.ಸಿ.', ಮತ್ತೊಮ್ಮೆ 'ಎಸ್ಟ್ರೊನಮಿ', ಇನ್ನೊಂದುಬಾರಿ 'ಯಮ್.ಎ. ಇಕಾನಮಿಕ್ಸ್–ನಾಗಪುರ ಯೂನಿವರ್ಸಿಟಿ ಪ್ರೈವೆಟ್'–ಎಂದುಬಿಡುತ್ತಾನೆ. ಸ್ವಲ್ಪ ಇನ್ನೂ ಕೆದರಿತೆಂದರೆ 'ಎರಡು ವರ್ಷದಲ್ಲಿ ಯುಮ್.ಎಸ್.ಸಿ. ಆದ ಮೇಲೆ ಅಮೇರಿಕಕ್ಕೆ, ಅಲ್ಲಿ ಪಿ.ಹೆಚ್.ಡಿ' ಎಂದು ಮುಂತಾಗಿ ಒದರಿಬಿಡುತ್ತಾನೆ. ಕೆಲವು ದಿನಗಳ ಹಿಂದೆ ಒಂದು ಟೆಲಿಸ್ಕೋಪು ಬೇಕೆಂದು 'ಮಯೋ–ಆರ್ಸ್' ಮತ್ತು ಇತರ ಅಂಗಡಿಗಳ ಬಾಗಿಲಲ್ಲಿ ತಿರುಗುತ್ತಿದ್ದ. ಅಮೇರಿಕ, ಜರ್ಮನಿಗಳ ಒಂದೆರಡು ಕಂಪೆನಿಗಳಿಗೆ ಬರೆದಿರುವೆನೆಂದು ತಿಳಿಸಿದ. ಒಂದು ದಿನ ಅವನು ಇಷ್ಟು ಓದುತ್ತಾನಲ್ಲ, ಏನು ಓದುತ್ತಾನೆ ಎಂದು ಪರೀಕ್ಷಿಸಬೇಕೆಂದಾಯಿತು. 'ಮಾರ್ಷಲರ ಇಕಾನಾಮಿಕ್ಸ್ ಹೇಗಿದೆ' ಎಂದು ಪ್ರಶ್ನಿಸಿದೆ. 'ಮಾರ್ಷಲ್ ಸ್ಟಾಲಿನ್ನರದೆ? ಬಹಳ ಚೆನ್ನಾಗಿದೆ' ಎಂದ. ಅದೆಲ್ಲ ಹೋಗಲಿ ಬರಿ ಸಣ್ಣ ಪುಸ್ತಕದ ವಿಚಾರ ಕೇಳುವ ಎಂದ್ಯ ಯೋಚಿಸಿ 'ಜಾತರ್ ಆಂಡ್ ಬರಿ ಓದಿರುವೆಯಾ?' ಎಂದು ಕೇಳಿದೆ. 'ಓದಿದೆ–ಬಹು ಭೇಷಾದ ಪುಸ್ತಕ. ಪೊಲಿಟೆಕ್ಸ್ ಒಂದು ಬರೆದು ಬಿಟ್ಟಿದ್ದಾನೆ—ಆಂದ್ರೆ ನಮ್ಮ ಹಿಂದೂ ಮಹಾಸಭೆ ಮುಖಂಡ ಜಯಪ್ರಕಾಶ ಇದ್ದಾನಲ್ಲ ಅವನೂ ಹಾಗೆ ಬರೆದಿಲ್ಲ' ಎಂದು ಮುಗಿಸಿದ. ಗೆಳೆಯನ ಓದಿನ ಪರಿಣಾಮ–ಪರಿಮಾಣ ಎರಡೂ ತಿಳಿಯಿತು.

ಮನಸ್ಸಾದರೆ ಸಮಾಜ ಉದ್ಧಾರಕ್ಕಾಗಿ ಚಂದಾ ಪಟ್ಟಿ ತೆಗೆದುಕೊಂಡು ಹೊರಡುವುದೂ ಉಂಟು ನನ್ನ ಗೆಳೆಯ. ಚಂದಾ ಬರೆಯಿಸಿ ರಶೀದಿ ಕೊಟ್ಟೇ ಬಿಡುತ್ತಾನೆ. 'ಈ ಹೊತ್ತು ಇಲ್ಲವಾದರೆ ನಾಳೆ ಕೊಡಿ' ಅನ್ನುತ್ತಾನೆ. ನಾಳೆ ಯಾರಿಂದ ಬಂತು – ಯಾರಿಂದ ಬರಲಿಲ್ಲ ಎಂದು ನೆನಪಿದ್ದರೆ ತಾನೆ! ಆದರೆ ಸಂಘ, ಸಂಸ್ಥೆಗಳದು ಒಂದು ಪೈ ತಿಂದು ಹಾಕಿದ ಪ್ರಾಣಿ ಅವ ನಲ್ಲ. ಬಹುಶಃ ಎಲ್ಲೋ ಕೈಯಲ್ಲಿ ಖರ್ಚಾಗಿರಬೇಕೆಂದು ಯೋಚಿಸಿ ಅಪ್ಪ ಸತ್ತ ಕೂಡಲೆ ತನಗೆ ಬಂದ ಅಪಾರ ಹಣ ದಿಂದ ಭರ್ತಿಮಾಡುತ್ತಿದ್ದ.

ಅವನಿಗೆ ಎಲ್ಲದರಲ್ಲೂ ಆಸಕ್ತಿ, ತಲೆ ತೀರಾ ಆಸಕ್ತಿ, ಮೈ ತೀರಾ ಆಸಕ್ತಿ, ಕೈ ತೀರಾ ಆಸಕ್ತಿ, ಮನಸ್ಸು ತೀರಾ ಆಸಕ್ತಿ... ಆಸಕ್ತಿಯ ಮೂರ್ತಿ...

ಒಂದು ದಿನ ಗವರ್ನರನ ಬಾಡಿಗಾರ್ಡ್‌ನೊಬ್ಬನು ಉನ್ನತ ಕುದುರೆಯಲ್ಲಿ ಹೋಗುವುದು ಕಂಡು ನಮ್ಮ ರಾಯ ರಿಗೆ ಸವಾರಿ ಕಲಿಯಬೇಕೆಂದಾಯಿತು. ಮರುದಿನವೆ ತನ್ನ ಕೈಗೆ ಬಂದ ಅಪಾರ ಹಣದಿಂದ ನಾಲ್ಕು ಸಾವಿರ ರೂಪಾಯಿ ಕುದುರೆಗೆ ಹೋಯಿತು. ಐನೂರು ರೂಪಾಯಿ ಕಲಿಸಿ ಕೊಡುವವನಿಗೆ ಹೋಯಿತು. ಎರಡು ದಿನಗಳಲ್ಲಿ ಕಾಲು ಮುರಿದುಕೊಂಡು ಸವಾರಿ ನಿಂತೇ ಹೋಯಿತು.

ತಿರುಪತಿಯನ್ನು ಒಮ್ಮೆ ಕೊಡಗಿನಲ್ಲಿ ನಮ್ಮ ತೋಟಕ್ಕೆ ಕರೆದುಕೊಂಡು ಹೋದೆ. ಕೆಲದಲ್ಲಿ ಕಾವೇರಿ ಹರಿಯು ತ್ತಿತ್ತು. ಮಂಜುಳ ನಿನಾದದಿಂದ. ಮಕ್ಕಳೆರಡು ನೀರಿನಲ್ಲಿ ಆಡು ತ್ತಿರುವುದು ಕಂಡು, ಈಜು ಕಲಿಯುವ ಆಸೆ ನನ್ನ ಗೆಳೆಯ

ನಿಗೆ ಕೆದರಿತು. 'ಈ ಕೋತು ನೀರಿನ ಹವ್ಯಾಸ ಬೇಡ'ವೆಂದೆ ಆದರೆ ಅವನೆಲ್ಲಿ ಕೇಳಬೇಕು? ಮೂರು ಘಂಟೆಗಳ ಕಾಲ ನೀರಿನಿಂದ ಏಳಲಿಲ್ಲ. ಬಳಿಕ ನನ್ನ ಬಲವಂತಕ್ಕೆ ನೀರಿನಿಂದ ಎದ್ದು ಬಂದ. ಸಂಜೆ ನೀರು ಕುಡಿದ ಮೈ ಕಾವೇರಿತು. ಮರುದಿನ ನಿಮೋನಿಯಾ...ಅದರ ಮರುದಿನ ಡಬ್ಬಲ್. ಅಲ್ಲಿಯ ಕಂತ್ರಿ (ಕಂಟ್ರಿ) ಡಾಕ್ಟರರಿಂದ ಪ್ರಯೋಜನವಾಗಲಿಲ್ಲ. ಮಡಿಕೇರಿಗೆ ಕಂಬಳಿಯಲ್ಲಿ ಹೊತ್ತು ತರಬೇಕಾಯಿತು. ಅಲ್ಲಿ ಅವನಪ್ಪ (ಅವನಪ್ಪ ಆಗ ಬದುಕಿದ್ದರು) 'ಮಗನನ್ನು ಕರೆದುಕೊಂಡು ಹೋಗಿ ಇಲ್ಲದಂತೆ ಮಾಡಿಬಿಟ್ಟೆ' ಎಂದು ಶಾಪಕೊಡುತ್ತಾನೋ ಎಂದು ಎದೆ ನಡುಗುತ್ತಿತ್ತು. ಪುಣ್ಯಕ್ಕೆ ಕೆಲವು ದಿನಗಳಲ್ಲಿ ಗುಣಮುಖನಾದ, ಬಳಿಕ ಅವನನ್ನು ನನ್ನ ಮದುವೆಗೂ ಬರ ಹೇಳಲಿಲ್ಲ. ಅವನ ಆಸಕ್ತಿಯನ್ನು ಯೋಚಿಸಿದರೇ ನನಗೆ ನಡುಕ!

ಅವನ ಅಪ್ಪ ಇದ್ದಾಗ ಒಮ್ಮೆ ಗೆಳೆಯ, ಪ್ರಾಣಿ ದಯಾ ಸಂಘಕ್ಕೆ ಸೇರಿದ. ಸೇರಿದ ದಿನ ಸಂಜೆ ಮನೆ ತುಂಬಾ ಪೋಲಿ ನಾಯಿಗಳ ಬೀಡು—ಅವುಗಳ ಜಗಳ. ದಾರಿಯಲ್ಲಿ ಕಂಡ ಅರೆ ಹೊಟ್ಟೆ ನಾಯಿಗಳನ್ನೆಲ್ಲ ಹಿಡಿದು ತಂದಿದ್ದ. ಬ್ಲಾಕ್ ಮಾರ್ಕೆಟಿನ ಕಷ್ಟದ ದಿನವೆಂದು ಅಪ್ಪ ಸೇರಿಗೆ ಎರಡು ರೂಪಾಯಿ ಕೊಟ್ಟು ತಂದ ಅಕ್ಕಿಯ ಬಹು ಭಾಗದಿಂದ ಬಡಕಲು ನಾಯಿಗಳಿಗೆ ಭಾರಿ ಔತಣವಾಯಿತು! ರಾತ್ರೆ ತೂತುಗಳಲ್ಲಿ ಹುದುಗಿದ್ದ ಇರುವೆಗಳಿಗೆಲ್ಲ ಸಕ್ಕರೆ ಸಮಾರಾಧನೆ. ಹಾಸಿಗೆಯಲ್ಲಿ ತುಂಬಿಕೊಂಡು ರಾತ್ರೆ ಇಡಿ ಕಚ್ಚಿದರೂ ರಾಯ ಒಂದನ್ನೂ ಕೊಲ್ಲಲಿಲ್ಲ. ಆ ಬದಿಯಿಂದ ಈ ಬದಿಗೆ ಹೊರಳುವಾಗಲೂ

ಬಹು ಜಾಗ್ರತೆಯಿಂದ ದೀಪದ ಬೆಳಕಿನಲ್ಲಿ ಇರುವೆ ಇದ್ದರೆ ಹುಡುಕಿ ಬಡಿಗೆ ಬಿಟ್ಟು ಮಲಗುತ್ತಿದ್ದ. ನೆಂಟರ ಮನೆಗೆ ಹೋಗಿದ್ದ ಅಪ್ಪ ಬೆಳಿಗ್ಗೆ ಬಂದು ಇದನ್ನು ಕಂಡು ಕಿಡಿಕಿಡಿ ಯಾದರು. ಹದಿನೆಂಟು ವರ್ಷಗಳಿಂದ ತಾಯಿ ಸತ್ತ ಬಳಿಕ ಅಕ್ಕರೆಯಿಂದ ಪಾಲಿಸಿದ ಮಗನಿಗೆ ನಾಲ್ಕು ಬಿಗಿದರು. ದಾತಾ ರನ ದುರವಸ್ಥೆಯನ್ನು ಕಂಡು ತಿಂದ ಅನ್ನವನ್ನು ಎಂದಿಗೂ ಮರೆಯದ ನಾಯಿಗಳೂ ಕಂಬಿಕಿತ್ತುವು! ಹಿಂಸಾ ಅಸ್ತ್ರದ ಎದುರು ತಿರುಪತಿಯ ಅಹಿಂಸಾ ಶಸ್ತ್ರ ಒಣಗಿಹೋಗಿರಬೇಕು!

ತಿರುಪತಿಯ ಕೋಣೆಯಲ್ಲಿ ಕಡಿಮೆಯಲ್ಲಿ ಒಂದು ನೂರಾ ದರೂ ಮಕ್ಕಳಾಡುವ ಬೆಲೂನುಗಳು, ಒಂದು ನೂರೈವತ್ತು ಗಾಂಧಿ–ನೆಹರು ಫೊಟೋಗಳು, ಒಂದೂವರೆ ಸಾವಿರ ಅವನು ಓದದ, ಬಿಡಿಸಿ ನೋಡದ—ನಮಗೆ ಉಪಯೋಗವಾಗುವ ಪುಸ್ತಕ, ಪತ್ರಿಕೆಗಳು ಸಿಕ್ಕಿಯಾವು! ಸ್ಟಾಂಪುಗಳು, ತಿಪ್ಪೆಯಿಂದ, ಉಗುಳಿದ ರಸ್ತೆಯಿಂದ ಹೆಕ್ಕಿದ ಬೆಂಕಿಪೆಟ್ಟಿಗೆಯ ಚಿತ್ರಗಳು ಎಷ್ಟೋ! ಒಂದೆರಡು ಡಜನಾದರೂ ಸವೆದ ಎತ್ತಿನ ಲಾಳ ಅವ ನಲ್ಲಿ ಇರಲಾರದೆಂದು ನಾನು ಹೇಳಲಾರೆ!

ನಿನ್ನೆ ನನ್ನ ಗೆಳೆಯ ತಿರುಪತಿಯ ಬಿಡಾರವಾದ 'ಯೂನಿವ ರ್ಸಿಟಿ ಲೈಬ್ರೆರಿ'ಯ ಮೆಟ್ಟಲೇರುತ್ತಿದ್ದೆ. ತಿರುಪತಿ ಒಂದು ಕಾರು ಏರಿಕೊಂಡು ಸರ್ರನೆ ಹೋಗುವುದು ಕಂಡೆ. ಒಬ್ಬ ಪೇದೆ 'ಓಯ್ ಮಿಸ್ಟಾರ್' ಎಂದು ಕಿರುಚಿ ಕರೆದ. 'ಫುಲ್ ಸ್ಪೀಡಿ' ನಲ್ಲಿ ಕಾರು ನಡೆಸಿಕೊಂಡು ಹೋಗುತ್ತಿದ್ದ ತಿರುಪತಿಗೆ ಏನೂ ಕೇಳಲಿಲ್ಲ. 'ಪ್ರಶಾಂತವಾದ ವಾತಾವರಣದಲ್ಲಿ ಇದೇನು ಸದ್ದು' ಎಂದು ಲೈಬ್ರೆರಿಯನ್ ಬಂದ. ಅವನ ಕಾರು ಅಲ್ಲಿಂದ

ಮಾಯವಾಗಿತ್ತು. ತಿರುಪತಿಯ ಕಾರು ಅಲ್ಲೇ ನಿಂತಿತ್ತು. ಯಾವಾಗಲೂ ಬರುವ ತಿರುಪತಿಯ ಮರವೆಯ ಪರಿಚಯವಿರುವ ಲೈಬ್ರೆರಿಯನ್ ತಲೆ ಕೆರೆದುಕೊಂಡು ನಸುನಕ್ಕ. ನಾನು 'ಈ ಆಸಾಮಿ ಕೈ ಹಿಡಿದ ಹೆಂಡತಿಯನ್ನು ಮರೆಯದಿದ್ದರೆ ಸಾಕು' ಎಂದುಕೊಂಡೆ. ಪಾಪ!



# ೬. ಕಪ್ಪಣಾಚಾರ್ಯರು

ಬ್ರಿಟಿಷರ ಆಡಳಿತೆ ಭಾರತದಿಂದ ತೊಲಗಿದುದಕ್ಕೆ ಮರುಗುವ ಅನೇಕ ಜನರನ್ನು ನಾನು ನೋಡಿದ್ದೇನೆ. ಅವರ ಸರಕಾರ ತಿರುಗಿ ಬರಲೆಂದು ಹಾರೈಸುವ ಮಂದಿಯನ್ನು ನಾನು ಕಂಡಿದ್ದೇನೆ. ಅಂತಹರಲ್ಲಿ ಕಪ್ಪಣಾಚಾರ್ಯರು ಒಬ್ಬರು. "ಒಬ್ಬರೆ"ಂದರೆ ತಪ್ಪಾದೀತು— 'ಅಗ್ರಗಣ್ಯ'ರೆಂದರೂ ಅವರಿಗೆ ಬ್ರಿಟಿಷರಲ್ಲಿರುವ ಮೋಹ–ಪ್ರೀತಿಗಳನ್ನು ಸಂಪೂರ್ಣ ಪರಿಚಯ ಮಾಡಿ ಕೊಡುವುದು ಕಷ್ಟ. ಆದರೆ ಅವರನ್ನು ದಾಸ್ಯ ಮನೋವೃತ್ತಿಯುಳ್ಳವರೆಂದು ಹೇಳಲು ನಾಲಗೆಯೇಳುವುದಿಲ್ಲ. ಪಾಪ, ಅವರದೇನು ತಪ್ಪು? ಹುಟ್ಟಿದಾರಭ್ಯ– ಇದು ತನಕವೂ– ಬ್ರಿಟಿಷರನ್ನು ಹೊಗಳಿದ ನಾಲಗೆಯದು, ಬ್ರಿಟಿಷರ ಚರಿತ್ರೆಯನ್ನು ಬಾಯಿಪಾಠ ಕಲಿತ ವಿದ್ವಾಂಸರವರು. ಶಾಲೆಯಲ್ಲಿ ಓದುತ್ತಿರುವಾಗಲೆ ಅರ್ಥ ತಿಳಿದು ಶುದ್ಧ ಮನಸ್ಸಿನಿಂದ 'God save the king...' ಎಂದು ಪ್ರಾರ್ಥಿಸಿದವರು. ವಿದ್ಯಾಭ್ಯಾಸವಾದ ಬಳಿಕ ಇಂಗ್ಲೀಷರ ಕೈಕೆಳಗೆ ಒಂದಲ್ಲ ಒಂದು ಆಡಳಿತ ವಹಿಸಿ ಅವರ ಉಪ್ಪನ್ನು ಉಂಡವರು. ಹೀಗಿರುತ್ತ ರಾಯರು ಉಪ್ಪನ್ನುಂಡ ಮನೆಗೆ (ಬ್ರಿಟಿಷ ಗವರ್ನಮೆಂಟಿಗೆ) ಅನ್ಯಾಯ ಬಗೆಯುವುದು ಸಾಧ್ಯವೆ? ಅದು ನೀತಿಯೆ? ಧರ್ಮವೆ?

ರಾಯರಿಗೆ ಈಗಿನ ಕಾಲದ ವಿಚಾರ ಸ್ವಾತಂತ್ರ್ಯ, ವಾಕ್ ಸ್ವಾತಂತ್ರ್ಯ, ಇನ್ನು ಅನೇಕ ತರದ ಸ್ವಾತಂತ್ರ್ಯಗಳೊಂದೂ ಅರ್ಥವಾಗುವುದಿಲ್ಲ. ಅವರಿಗೆ ಎಲ್ಲಾ ವಿಷಯದಲ್ಲಿಯೂ ಖಂಡ

ತುಂಡ ಅಭಿಪ್ರಾಯವಿದೆ. ತನ್ನ ಹೆಂಡತಿ ಹೇಗಿರಬೇಕು, ಮಕ್ಕಳು ಹೇಗಿರಬೇಕು, ಅವರು ಹೇಗೆ ನಿಲ್ಲಬೇಕು, ಹೇಗೆ ಬರೆಯಬೇಕು, ಯಾವ ರೀತಿ ಬಟ್ಟೆ ಬರೆ ಹಾಕಬೇಕು, ಏನು ತಿನ್ನಬೇಕು... ಇತ್ಯಾದಿ...ಇತ್ಯಾದಿ ಎಲ್ಲಾ ವಿಚಾರದಲ್ಲೂ ಅವರು ತಮ್ಮ ಅಭಿಪ್ರಾಯವನ್ನು ಹೇಳುವವರೆ. ಮಡದಿ ಮಕ್ಕಳು ಆಳು ಕಾಳು ಎಲ್ಲ ಈ ರೀತಿ ನಡೆಯಬೇಕು. ಅವರು ಹೇಳಿದಂತೆ ಮಕ್ಕಳು ಮಡದಿ ನಡೆಯದಿದ್ದರೆ ಬಳಿಕ ಮನೆಯಲ್ಲಿ 'ಶಾಂತಿ' ಇಲ್ಲ.

ಅವರ ಒಂದು ವಿಶೇಷ ಗುಣ ಅಥವಾ ಅವರ ದೊಡ್ಡ ಆದರ್ಶ ತತ್ವ–'ಶಿಸ್ತು'. ಬೆಳಗ್ಗೆ ಎದ್ದಂದಿನಿಂದ ಮಲಗುವ ತನಕ ಪ್ರತಿಯೊಬ್ಬರು 'ಶಿಸ್ತಿ'ನಿಂದ ಇರಲೆ ಬೇಕು. ಆದರೆ ಅವರು ನಮ್ಮ ಕಾಲದ ಮುಖಂಡರಂತಲ್ಲ ಅವರು 'ದಿಳ್ಳಿಯಿಂದ ಹಳ್ಳಿಗೆ ಹೋಗಿ' ಎನ್ನುತ್ತ ಹಳ್ಳಿಯನ್ನು ನೋಡಿ ತಿಳಿಯದ ಪ್ರಮುಖರಂತಲ್ಲ; 'ಉಳುವವನಿಗೆ ಜಮೀನೆಂದು ಬೊಬ್ಬಿಡುತ್ತ ಉಳುವವನಿಂದ ಚಿಕ್ಕಾಸು ಬಾಕಿಯಾದರೆ ಒಕ್ಕಲೆಬ್ಬಿಸಲು ವ್ಯಾಜ್ಯ ಹೂಡುವ 'ಬಡವರ ಬಂಧು'ಗಳಂತೆ ಅವರಲ್ಲ. ಅವರು 'ಶಿಸ್ತಿ'ನಂತೆ ನಡೆಯುತ್ತಾರೆ. ಬಾಕಿಯವರೂ ನಡೆಯಲೆ ಬೇಕು.

ಮನೆಯವರೆಲ್ಲ ಅವರೊಡನೆ ಚಳಿಯಾಗಲಿ–ಮಳೆಯಾಗಲಿ ಐದೂವರೆಗೆ ಏಳಲೆ ಬೇಕು. ಎದ್ದೊಡನೆ ಮುಖಮಾರ್ಜನಗಳನ್ನು ತೀರಿಸಿ ಅವರೊಡನೆ ಅರ್ಧ ಘಂಟೆ ಅಂಗಸಾಧನೆ ಮಾಡಲೆ ಬೇಕು. ಅವರ ಹೆಂಡತಿ, ಹೆಣ್ಣು ಹುಡುಗಿಯರಿಗೆ (ಈ ಶಿಸ್ತು) ಇದಿಲ್ಲ. ಆದರೆ ಅವರು ಆ ಹೊತ್ತಿನಲ್ಲಿ ಮನೆ

ಯನ್ನು ಶುಚಿಪಡಿಸಲೇ ಬೇಕು. ಬೆಳಗ್ಗೆ ಊಟಕ್ಕೆ ಇದೇ ಆಗಬೇಕು... ಅದೇ ಆಗಬೇಕು ಎಂಬ ನಿಯಮಗಳಿವೆ. ಸ್ವಲ್ಪ ಹೆಚ್ಚು ಕಡಿಮೆಯಾದರೆ ಮುಗಿಯಿತು, ರಾಯರ 'ರಂಪ' ಅವರ ಬೈಗಳು, ಅವರ ಬೊಬ್ಬೆ ಅವರು ಆಫೀಸಿಗೆ ಹೊರಡುವ ತನಕವೂ ಉಂಟು. ಒಂದಿನಿತಾದರೂ ಏನಾದರೂ ಹೆಚ್ಚು ಕಡಿಮೆಯಾಗದ ದಿನ ಉಂಟೆ? ವಾರದ ಏಳು ದಿನಗಳಲ್ಲಿ ಐದು ದಿನವಾದರೂ ಅದು ನಡೆದೇ ನಡೆಯುತ್ತಿತ್ತು. ಅಂತೂ ರಾಯರು ಆಫೀಸಿಗೆ ಹೊರಡುವ ತನಕ ರಾಯರ ಶಿಸ್ತಿನಿಂದಾಗಿ ಯಾರಿಗೂ ಸುಖವಿಲ್ಲ. ಎಲ್ಲರೂ ಜೈಲಿನಲ್ಲಿಯ ಕೈದಿಗಳಂತೆ. ಅವರ ಎದುರಿನಲ್ಲಿ ದೊಡ್ಡದಾಗಿ ಮಾತನಾಡುವುದು ಕಷ್ಟ, ದೊಡ್ಡದಾಗಿ ನಕ್ಕರೆ ಮುಗಿಯಿತು—ನಕ್ಕವನು ಅವರ ಬೈಗಳು ಕೇಳಿ, ಅವರ ಆರ್ಭಟೆ ಕಂಡು ಬಳಿಕೆರಡು ವರ್ಷ ಅವನ ತುಟಿಗಳಿಂದ ನಗೆ ಸೂಸದು. ರಾಯರಿಗೆ ಶಿಸ್ತಿಲ್ಲದಿರುವುದು ಒಂದೇ ವಿಚಾರದಲ್ಲಿ–ಅವರಿಗೆ 'ಶಿಸ್ತು' ತಪ್ಪಿದರೆ ಬರುವ ಕೋಪದಲ್ಲಿ– 'ಶಿಸ್ತು' ತಪ್ಪಿದರೆ ಅವರು ಆರ್ಭಟಿಸುವಲ್ಲಿ.

ರಾಯರ ಶಿಸ್ತನ್ನು ಅನೇಕ ಮಂದಿ ಹೊಗಳುವುದನ್ನು ನಾನು ಕಿವಿಯಾರೆ ಕೇಳಿದ್ದೇನೆ. ಅವರು ಆಫೀಸಿಗೆ ಹೊರಡುವುದು ಸರಿಯಾಗಿ ಒಂಬತ್ತೂವರೆಗೆ. ಅವರು ಹೊರಡುವುದನ್ನು ನೋಡಿ ನನ್ನ ಗಡಿಯಾರದಂತೆ ಶಿಸ್ತಿಲ್ಲದ ನಾನು ಅನೇಕ ಬಾರಿ ನನ್ನ ಗಡಿಯಾರವನ್ನು ಸರಿಪಡಿಸಿಕೊಂಡಿದ್ದೇನೆ. ಅವ್ಯರನ್ನು ನೋಡಿದೊಡನೆ ಶಿಸ್ತಿನ ನೆನಪು ನನಗೆ ಕೂಡಲೆ ಬರುತ್ತದೆ. ಗುಂಡಿಯನ್ನು ಸಿಕ್ಕಿಸದೆ ನಾನು ದೊಡ್ಡ ಮನುಷ್ಯ

ನಂತೆ ಠೀವಿಯಿಂದ ನಡೆಯುವಾಗ ಅವರು ಎದುರು ಬಂದರೆ ಸಾಕು ತನ್ನಿಂತಾನೆ ನನ್ನ ಬೆರಳುಗಳು ಕೋಟಿನ ಗುಂಡಿಗಳನ್ನು ಸಿಕ್ಕಿಸಲು ಮುಂದುವರಿಯುತ್ತವೆ. ರಾಯರು ಸವಾರಿ ಮಾಡುವ ಸೈಕಲ್ಲನ್ನು ನಾವು ಕೈ ತೊಳೆದು ಮುಟ್ಟಬೇಕು. ಅದನ್ನು ಕೊಂಡುಕೊಂಡು ಹದಿನೈದು ವರ್ಷಗಳಾದರೂ ಅದು ಇನ್ನೂ ಹೊಸತಿನಂತೆ ಹೊಳೆಯುತ್ತಿದೆ. ಅವರು ಒಂದಿಷ್ಟು ಕೊಳೆಯಾದ, ಇಸ್ತ್ರಿ ಇಲ್ಲದ ಬಟ್ಟೆಬರೆಗಳನ್ನು ಇದು ತನಕ ಧರಿಸಿರುವುದನ್ನು ನಾನು ಕಂಡಿಲ್ಲ. ಹೊರಗೆ ಹೋಗುವಾಗ ಮುಂಡಾಸನ್ನೂ—ಹೇಟನ್ನೂ ಧರಿಸಲೆ ಬೇಕು. ಆ ಸೈಕಲ್ಲನ್ನು ಏರುವ ಕ್ರಮದಲ್ಲೂ ಅದೊಂದು ಕ್ರಮ. ಹಾಕಿದ ಪಳಪಳ ಹೊಳೆಯುವ ಶೂ ಪೆಡ್ಲಿಗೆ ಹೊರತು ಮತ್ತೆಲ್ಲಿಗೂ ತಗಲದು– ತಗಲಕೂಡದು. ಸೈಕಲ್ಲಿನಲ್ಲಿ ಪ್ರಯಾಣ ಮಾಡುವಾಗಲೂ ಹಾಗೆಯೇ– ಕಾಲುಗಳು ಗಡಿಯಾರದ ಪೆಂಡ್ಯುಲಮ್ ಅಲ್ಲಾಡಿದಂತೆ. ರಾಯರು ಈಗ ಅದನ್ನು ಮಾರಲು ನಿಶ್ಚಯಿಸಿರುವರು. ಅವರದನ್ನು ಅಗ್ಗವಿದ್ದಾಗ ಐವತ್ತು ರೂಪಾಯಿಗೆ ಕೊಂಡುಕೊಂಡಿದ್ದರು. ಈಗ ಮಾರಾಟ ಮಾಡಲು ನಿಶ್ಚಯಿಸಿದ್ದು ನೂರಐವತ್ತು ರೂಪಾಯಿಗಳಿಗೆ!

ಮಡದಿ ಮಕ್ಕಳಿಗೆಲ್ಲ ರಾಯರ ಮೇಲೆ ಅಪಾರ ಪ್ರೇಮ. ಅವರಿಗೂ ಹಾಗೆಯೆ. ಆದರೂ ಅವರು ಒಂದು ದಿನ ಸುಖದಿಂದ ಬಾಳಿದ್ದು ನನಗೆ ಗೊತ್ತಿಲ್ಲ. ಅವರ ಪ್ರೀತಿಯು ಶಿಸ್ತುಗಳೇ ಅವರ ಆನಂದವನ್ನು ಕೆಡಿಸಿವೆ. ಹೊಟ್ಟೆ ತುಂಬ ಉಂಡರೂ ಮಲಗುವ ಮುನ್ನ ಹೆಂಡತಿ ಮಕ್ಕಳು ಹಾಲು ಕುಡಿಯಲೆ ಬೇಕು. 'ಹೊಟ್ಟೆ ತುಂಬಿದೆ, ಹಸಿವಿಲ್ಲ, ಅಜೀರ್ಣವಾಗಿದೆ'

ಎನ್ನುವಂತಿಲ್ಲ. ಹಾಗೆ ಹೇಳಿದರೆ 'ಯಾಕೆ ತಿಂದದ್ದು? ಹೆಚ್ಚು ತಿನ್ನಬಾರದೆಂದು ತಿಳಿಯದೆ? ಶಿಸ್ತಿಲ್ಲ–ಮಣ್ಣಿಲ್ಲ' ಎಂದು ರಾಯರ ಜೋರು ಇದ್ದೇ ಇದೆ. ಹಸಿವಿಲ್ಲದಿದ್ದರೂ ರಾಯರ 'ಶಿಸ್ತಿ'ಗೆ ಹೆದರಿ ಮಡದಿ ಮಕ್ಕಳು ಹಾಲು ಕುಡಿದೆ ಮಲಗುತ್ತಾರೆ.

ರಾಯರಿಗೆ ಮಡದಿ ಮಕ್ಕಳನ್ನು ಎಲ್ಲಿಗೂ ಕಳುಹಿಸಲು ಮನಸ್ಸಿಲ್ಲ. ಶಿಸ್ತಿಲ್ಲದ ಜನರೊಂದಿಗೆ ಒಡನಾಡಿ ತನ್ನ ಆತ್ಮೀಯರು ಕೆಟ್ಟು ಹೋಗುತ್ತಾರೆಂದು ರಾಯರಿಗೆ ಭಯ. ಅವರು ನೆರೆಮನೆಗೆ ಹೋಗಬೇಕಾದರೆ ರಾಯರು ಆಫೀಸಿಗೆ ಹೋದ ಸಮಯವನ್ನು ನೋಡಿ ಕದ್ದು ಹೋಗಬೇಕು. ಮದುವೆಯಾದ ಬಳಿಕ ರಾಯರ ಹೆಂಡತಿ ತವರಿಗೆ ಹೋದ ಸಂದರ್ಭಗಳನ್ನು ಬೆರಳುಗಳಿಂದ ಎಣಿಸಬಹುದು. ಅಲ್ಲಿ ಇದ್ದ ದಿನಗಳು ಸರ್ತಿಗೆ ಒಂದು ವಾರದಿಂದ ಹೆಚ್ಚು ಇರಲಾರದು.

ರಾಯರ ಶಿಸ್ತನ್ನು ಕಂಡು ಅವರ ಮೇಲಿನ ಆಫೀಸರರಿಗೆಲ್ಲ ಪ್ರೇಮ. ಅವರ ಕೆಲಸವೆಲ್ಲ ಚೊಕ್ಕ ಶುದ್ಧ. ಅವರು ಯಾವ ಆಫೀಸಿನ ಮೇಲ್ತನಿಖೆ ಮಾಡಲಿ, ಅಲ್ಲಿಯ ಕೆಲಸ ಸಂಪೂರ್ಣ– ಪರಿಪೂರ್ಣ. ಇದು ಅವರ ಶಿಸ್ತಿನ ಫಲ. ಇವರಿಂದಾಗಿ ಬರೇ ಕಾರಕೂನರಾಗಿದ್ದ ರಾಯರು ಡಿಪ್ಟಿ ಕಲೆಕ್ಟರರಾಗಿದ್ದಾರೆ. ಸೈಕಲ್ ಮಾರಿ ಕಾರು ತೆಗೆದುಕೊಳ್ಳುವ ಯೋಚನೆ ಮಾಡುವ ಅಂತಸ್ತಿಗೆ ಏರಿದ್ದಾರೆ!

ಆದರೆ ಭಾರತ ಸ್ವತಂತ್ರವಾದ ಬಳಿಕ ಅವರ ಮುಖವನ್ನು ಒಂದಿನಿತು ದುಃಖ ಆವರಿಸಿದೆ. ಹಿಂದೆ ಆಫೀಸರನೆಂದರೆ ಜನ– ಕೆಳಗಿನವರು ನಡುಗುತ್ತಿದ್ದರು. ಈಗ ಈ

ಸ್ವಾತಂತ್ರ್ಯ ಬಂದು ಅವರು ಹೆದರಿದ್ದು — ಶಿಸ್ತಿಲ್ಲದೆ ಕೆಲಸ ಸರಿಯಾಗಿ ಆಗುವುದಿಲ್ಲವೆಂದು ರಾಯರ ಅಭಿಪ್ರಾಯ. ರಾಯರು ಕಾಂಗ್ರೆಸು ಸರಕಾರ ಬಂದರೂ ತಮ್ಮ ಸರ್ಜ್ ಕೋಟು, ಬ್ರಿಟಿಷ್ ವೇಶ ಭೂಷಣ ಬದಲಾಯಿಸಿಲ್ಲ. ಇಸ್ತ್ರಿ ಇಲ್ಲದ ಬಿಳಿ ಟೊಪ್ಪಿ, ಡಗ್ಲರ್ ಅಂಗಿ ಕಂಡರೆ ಅವರಿಗೆ ಇಂದಿಗೂ ಒಂದು ಅನಿರ್ವಚನೀಯ ಯಾತನೆ! ಆದರೂ ಜೀವನಕ್ಕಾಗಿ ಕಾಂಗ್ರೆಸ್ ಸರಕಾರದ ಉಪ್ಪು ಈಗ ತಿನ್ನುತ್ತಿರುವ ಅವರು ಅದನ್ನೆಲ್ಲ ಸಹಿಸುತ್ತಾರೆ.

ಮೊನ್ನೆ ಶಾಲೆಯಿಂದ ನನ್ನ ಕ್ಲಾಸಿನಲ್ಲೇ ಕಲಿಯುತ್ತಿದ್ದ ಅವರ ಮಗ ಬರುವಾಗ ಬಿದ್ದು ಕಾಲು ನೋವಾಗಿ ಕುಂಟುತ್ತ ಬರುತ್ತಿದ್ದ. ಪೆಟ್ಟು ಸ್ವಲ್ಪ ಜೋರಾಗಿಯೇ ಆಗಿತ್ತು. ನಾನು ಅವನನ್ನು ಮನೆಯ ತನಕ ಮುಟ್ಟಿಸಿ ಬರೋಣವೆಂದು ಒಟ್ಟಿಗೆ ಬಂದಿದ್ದೆ. ಸ್ವಲ್ಪ ತಡವಾಯಿತು. ದಾರಿಯಲ್ಲೆ ಆಫೀಸಿನಿಂದ ಮನೆಗೆ ಬರುತ್ತಿರುವ ರಾಯರು ಸಿಕ್ಕಿದರು. ಅವರ ಕಣ್ಣು ಸಹಜವಾಗಿ ಬೇಂಡೆಜ್ ಕಟ್ಟಿದ ಕಾಲಿಗೆ ಹೋಯಿತು. ಆದರೆ ಅವರು ಕೇಳಿದ ಪ್ರಶ್ನೆ, 'ಈ ಹೊತ್ತು ಶಾಲೆಗೆ ಹೋಗುವಾಗ ಹೇಟ್ ತೆಕ್ಕೊಳ್ಳಲಿಲ್ಲವೆನೊ?' ರಾಯರ ಮಗ ಮಾತನಾಡಲಿಲ್ಲ. ಮರುಕದ ನಗೆ ಅವನ ಮುಖದಲ್ಲಿ ತೇಲಿತು!



# ೭. ಪಿಯೆಚ್‌ಡಿ. ಡೊಂಕ

ನಾನು ಮತ್ತು ನನ್ನ ಭಾವ ಕೃಷ್ಣ ಮಂಗಳೂರಿನ 'ಬಾವಟೆ ಗುಡ್ಡೆ'ಗೆ ಗಾಳಿ ತಿನ್ನಲು ಹೋಗಿದ್ದೆವು. ನಾನು ಮಂಗಳೂರನ್ನು ಬಿಟ್ಟು ಕೆಲವು ವರ್ಷಗಳಾಗಿದ್ದುದರಿಂದ, ನಾನು ಪ್ರತಿ ದಿನ ಬಾಲ್ಯದಲ್ಲಿ ಓಡಾಡುತ್ತಿದ್ದ ಪ್ರದೇಶವನ್ನು—ಆ ಸೌಂದರ್ಯ ರಾಶಿಯನ್ನು— ತನ್ಮಯನಾಗಿ ನೋಡುತ್ತಿದ್ದೆ. ಪಡುಗಡಲು ಆಗಷ್ಟೆ ಮುಳುಗುವ ಸೂರ್ಯನಿಂದ ರಾಗರಂಜಿತ ವಾಗಿತ್ತು. ನನಗೆ ಆ ಭಾವಪರವಶತೆ ಹರಿದುದು, ನನ್ನ ಭಾವ 'ನಮುಸ್ಕಾರ ಸಾರ್' ಎಂದಾಗಲೆ.

ತಿರುಗಿ ನೋಡುತ್ತೇನೆ—ನನ್ನ ಮುಂದೆ ನಾಲ್ಕಡಿಯ, ಕೆದರಿದ ತಲೆಯ, ಮೊಣಕಾಲಿನ ತನಕ ಕಾಕಿ ಇಜಾರು ಧರಿಸಿ ಅದೇ ಬಣ್ಣದ ಹಳಸಲು ಕೋಟು ಹಾಕಿದ, ಕೈ ತುಂಬಾ ಪುಸ್ತಕಗಳನ್ನು ಹಿಡಿದುಕೊಂಡ 'ಎಣ್ಣೆ ಕಪ್ಪಿ'ನ ವ್ಯಕ್ತಿಯೊಂದು ಮುಖದಲ್ಲಿ ಯಾವ ತೆರನಾದ ಬದಲಾವಣೆಯೂ ಇಲ್ಲದೆ— ನನ್ನ ಭಾವನ ನಮುಸ್ಕಾರವನ್ನು ಮರುಪಾವತಿ ಮಾಡುತ್ತಿತ್ತು. ನನ್ನ ಭಾವ ನಮುಸ್ಕರಿಸಲು ಯೋಗ್ಯತೆಯುಳ್ಳ ಈ ಮನುಷ್ಯ ಯಾರಿರಬಹುದೆಂದು, ಅವನು ಸ್ವಲ್ಪ ದೂರ ಹೋಗುವ ತನಕವೂ ಅವನನ್ನೇ ನೋಡಿದೆ.

ನನ್ನ ಭಾವ, 'ಯಾರೆಂದು ನಿಮಗೆ ಗೊತ್ತೊ?' ಎಂದು ಕೇಳಿದ.

‘ಯಾರು? ನಿಮ್ಮ ಕಾಲೇಜಿನ ಜವಾನನೆ? ಅವನಿಗೂ ನಮಸ್ಕಾರವೆ?’ ಎಂದೆ.

‘ಸರಿ ಹೋಯ್ತು! ನಮ್ಮ ‘ಇಕೋನೋಮಿಕ್ಸ್’ ಪ್ರೊಫೆಸರಯ್ಯ’ ಎಂದ.

‘ಏನು ಪ್ರೊಫೆಸರರೆ!’ ಬೆಳೆದ ಗಡ್ಡವನ್ನು ಎಡಗೈಯಿಂದ ಸವರುತ್ತ ದೂರದಲ್ಲಿ ಹೋಗುತ್ತಿದ ವ್ಯಕ್ತಿಯನ್ನು ಆಶ್ಚರ್ಯದಿಂದ ನೋಡಿದೆ!

‘ಅವರೆ–ಪಿಯೆಚ್‌ಡಿ ಡೊಂಕರೆಂದರೆ...’ ಭಾವ ಮುಂದುವರಿಸಿದ.

ನನ್ನ ಭಾವ, ‘ಈ ವ್ಯಕ್ತಿ ಪಿಯೆಚ್‌ಡಿ’ ಎಂದಾಗ, ನನ್ನ ಕಿವಿಗಳನ್ನೆ ನಾನು ನಂಬಲಿಲ್ಲ. ಕುತೂಹಲವಂತೂ ಬಹಳ ಕೆರಳಿತು. ನೋಡಿದರೆ ಜವಾನನಿಗಿಂತ ಕಡೆ ಇದ್ದಾನೆ. ಪ್ರೊಫೆಸರನಂತೆ. ಪಿಯೆಚ್‌ಡಿ ಅಂತೆ! ಹೊಲಸು ನಾತ ಬಡಿಯುವ ವಸ್ತ್ರ. ಗುಂಡಿ ಹಾಕಿದುದು ಕೆಳಗೆ ಮೇಲೆ...

‘ಏನು ತುಸು ಸಡಿಲೆ?’ ಎಂದು ಪ್ರಶ್ನಿಸಿದೆ.

‘ಸಡಿಲಲ್ಲ...ಸಿಡಿಲು! ಕೆಣಕಿ ನೀನೇ ನೋಡಬೇಕು...’ ಮಧ್ಯ ರಾತ್ರಿಯಲ್ಲಿ ಸೂರ್ಯ ಉದಯಿಸಿದ್ದರೂ ನಮಗೆ ಅಷ್ಟು ಆಶ್ಚರ್ಯವಾಗುತ್ತಿರಲಿಲ್ಲ.

‘ಸಿಡಿಲೆಂದರೆ...... ಬಯ್ಯುತ್ತಾನೆಂದಲ್ಲ. ಅಷ್ಟು ಓದಿದ್ದಾನೆ. ವಾದಕ್ಕೆ ಹೊರಟನೆಂದರೆ ಪ್ರತಿವಾದಿ ಚಟ್ಟು. ೧೮೦೦ನೆಯ ಇಸವಿಯಿಂದ ಈ ದಿನದ ತನಕ, ನಮ್ಮ ಊರಿನಲ್ಲಿ ಎಂದೇನು— ಈ ಇಡೀ ಭೂಲೋಕದಲ್ಲಿ— ಕಾಫಿ, ತೆಂಗು, ಗೋಧಿ, ಅಕ್ಕಿ, ಗೇರುಬೀಜ, ಅದು ಇದು ಎಂದಿಲ್ಲ—ಪ್ರತಿ

ಯೊಂದು ಎಲ್ಲಿಲ್ಲಿ ಎಷ್ಟೆಷ್ಟು ಬೆಳೆಯಿತು, ಎಂದು ಬೇಕಾದರೆ ಹೇಳಬಲ್ಲ. ಅದು ಹೋಗಲಿ—ನಮ್ಮ ಆಧಿಪತ್ಯದಲ್ಲಿ ಯಾವ ಯಾವ ಮನೆಯಲ್ಲಿ ಎಷ್ಟೆಷ್ಟು ಕಪ್ಪೆಗಳು ಬಾವಿಯಲ್ಲಿವೆ ಎಂದು ಲೆಕ್ಕ ಹಾಕಿದ್ದಾನೆ ಅವನು. ಅವನಿಗೆ ಹೆಸರೇ ವಾಕಿಂಗ್ ಎನ್‌ಸೈಕ್ಲೊಪಿಡಿಯ' ಎಂದು.

'ನಿನ್ನ ತಲೆಬುರುಡೆ. ಬಾವಿಯಲ್ಲಿ ಎಷ್ಟು ಕಪ್ಪೆಯಿದೆ ಯೆಂದು ಹೇಳುತ್ತಾನೆ! ಮತ್ತೇನು ಬಾಕಿ! ನಿನ್ನ ತಲೆಯಲ್ಲಿ ಕೂದಲು ಎಷ್ಟು ಉಂಟು ಎಂದೂ ಹೇಳಿಯಾನು ಎಂದು ಕಾಣುತ್ತದೆ!'

'ನಿನಗೆ ನನ್ನ ಮಾತಿನಲ್ಲಿ ನಂಬಿಗೆಯಿಲ್ಲವಷ್ಟೆ. ನಾಳೆ ಬೇಕಾದರೆ ನಿನ್ನನ್ನು ಅವರ ಮನೆಗೆ ಕರೆದೊಯ್ಯುತ್ತೇನೆ. ನೀವೇ ನೋಡಬಹುದು. ನಾನೂ ಪರೀಕ್ಷೆಯ ಪ್ರಶ್ನೆ ಪತ್ರಿಕೆ ಕದಿಯ ಬೇಕಾಗಿದೆ!' ಎಂದ.

'ಹೂಂ ನೋಡುವ' ಎಂದು ನಾವು ಮನೆಗೆ ಹೋಗಲು ಎದ್ದೆವು.

ಮರುದಿನ ಮೂರುವರೆ ಘಂಟೆಗೆ ಕಾಫಿ ಕುಡಿದೊಡನೆ, ಭಾವ ಕೇಳಿದ: 'ಪಿಯೆಚ್‌ಡಿ ಡೊಂಕರ ಮನೆಗೆ ಬರುತ್ತೀರಾ?' ಎಂದು.

'ನೋಡುವ ನಿನ್ನ ಪಿಯೆಚ್‌ಡಿ ಎನ್‌ಸೈಕ್ಲೋಪಿಡಿಯ ವನ್ನು...'

ಭಾವ ನನ್ನನ್ನು ಕರೆದುಕೊಂಡು ಆ ಓಣಿ– ಈ ಓಣಿ ಸುತ್ತಿಸಿ, ಒಂದು ಸಣ್ಣ ಮನೆಯ ಮಹಡಿಗೆ ಕರೆದೊಯ್ದ.

ಬಾಗಿಲಿನಲ್ಲಿ 'ಡೊಂಕ, ಪಿಯೆಚ್‌ಡಿ' ಎಂಬ ಹೆಸರಿನ ಹಲಗೆ ಇತ್ತು. ಬಾಗಿಲು ಅರ್ಧ ಮುಚ್ಚಿತ್ತು. ನನ್ನ ಭಾವ ಮೂರು ನಾಲ್ಕು ಬಾರಿ ತಟ್ಟಿದ; ಉತ್ತರ ಬರಲಿಲ್ಲ. ಮೆಲ್ಲಗೆ ಬಾಗಿಲು ಸರಿಸಿ ಒಳಗೆ ಹೋದೆವು. ನಿನ್ನೆ ನೋಡಿದ ವ್ಯಕ್ತಿಯೇ ಕುರ್ಚಿಯಲ್ಲಿ ಒಂದು ಬಣ್ಣದ ಪೆನ್ಸಿಲನ್ನು ಕಚ್ಚುತ್ತ, ಓದುವು ದರಲ್ಲಿ ನಿಮಗ್ನವಾಗಿತ್ತು. ಅದಕ್ಕೆ ನಾವು ಬಂದುದು ತಿಳಿ ಯಲೇ ಇಲ್ಲ. ನಿನ್ನೆ ಹಾಕಿಕೊಂಡಿದ್ದ ಅದೇ ಈಜಾರು; ಕೋಟು ಮಾತ್ರ ಇಲ್ಲ. ನಾನು ಬದಿಯಲ್ಲಿದ್ದ ಬೆಂಚಿನ ಮೇಲೆ ಕುಳಿತು ಕೋಣೆಯ ಸುತ್ತಲೂ ಕಣ್ಣು ತಿರುಗಿಸಿದೆ. ಎಲ್ಲಿ ನೋಡಿದರೂ ಪುಸ್ತಕಗಳು, ಪುಸ್ತಕಗಳು ಪುಸ್ತಕಗಳು......ಕಾಗದಗಳು, ಕಾಗದಗಳು, ಕಾಗದಗಳು...! ಒಂದು ಐವತ್ತು ಪತ್ರಿಕೆಗಳು ದೇಶ–ವಿದೇಶದವುಗಳು! ಧೂಳು–ಕಸ...ಗೀಚಿದ ಬೆಂಕಿಕಡ್ಡಿ... ಬೀಡಿ ಚೂರುಗಳು. ಒಂದು ಮಲಿನವಾದ ಹಾಸಿಗೆ ಈ ಪುಸ್ತ ಕಗಳ ಮೇಲೆ [ಭೀಷ್ಮ ಶರಶಯ್ಯೆಯಲ್ಲಿ ಮಲಗಿದಂತೆ] ನಿದ್ದೆ ಮಾಡಲು ಒದ್ದಾಡುತ್ತಿತ್ತು!

ಹತ್ತು ನಿಮಿಷ ಈ ಆರೋಗ್ಯಧಾಮದಲ್ಲಿ ಸುಮ್ಮನೆ ಕಳೆ ದೆವು. ಇಷ್ಟರಲ್ಲಿ ಕೋಣೆಯಲ್ಲಿದ್ದ ಹಳೆಯ ಗಡಿಯಾರವೊಂದು 'ಠಣ್' ಎಂದು ಬಾರಿಸಿತು. ಡೊಂಕಯ್ಯನ ಕಣ್ಣುಗಳು ಠಟ್ಟನೆ ಅತ್ತ ಹೋದುವು. ಕೈಯಲ್ಲಿದ್ದ ಪುಸ್ತಕ ದಢಲ್ಲನೆ ಮುಚ್ಚಿಕೊಂಡಿತು. ಓದಿನ ಸಮಾಧಿಯಿಂದ ಎದ್ದೊಡನೆ ಡೊಂ ಕನಿಗೆ ನಾವು ಬಂದುದರ ಅರಿವಾಯಿತು. 'ಏನು ಬಂದಿರಿ?' ಎಂದು ಪ್ರಶ್ನಿಸಿದ.

ನನ್ನ ಭಾವ ಸುರು ಮಾಡಿದ: 'ಏನಿಲ್ಲ, ಇಲ್ಲೇ ಹೋಗು

ತ್ತಿದ್ದೆವು. ಬಹಳ ಬಾಯಾರಿಕೆಯಾಯಿತು. ನಿಮ್ಮ ಕೋಣೆ ನೆನಪಾಗಿ ನೀರು ಕುಡಿಯುವ ಎಂದು ಬಂದೆವು!' ಡೊಂಕ 'ಹೋ ಹೋ ಹೋ' ಎಂದು ಸಣ್ಣ ನಗೆ ನಕ್ಕ. ಹುಟ್ಟಿದ ಬಳಿಕ ತೊಳೆಯದ ಎರಡು ಹಲ್ಲುಗಳು ಇಣಿಕಿದುವು.

'ಬಾಯಾರಿಕೆ ಆದದ್ದು ನೀರಿಗೋ— ಪ್ರಶ್ನೆ ಪತ್ರಿಕೆಗೋ!'—ಎಂದು ತಟಕ್ಕನೆ ಪ್ರಶ್ನಿಸಿದ. ನನ್ನ ಭಾವನ ಮುಖ ಸುಟ್ಟ ಬದನೆಕಾಯಿಯ ಹಾಗೆ ಎನ್ನುತ್ತಾರಲ್ಲ—ಹಾಗಾಯಿತು.

'ಬಹಳ ಜಾಣ ಕಣಯ್ಯ—ಇವನು; ಕಳೆದ ಬಾರಿಯೂ ಪರೀಕ್ಷೆ ಬರಲು ಇನ್ನೆರಡು ದಿನಗಳಿರುವಾಗ, ಇವನಿಗೆ ಬಹಳ ಬಾಯಾರಿಕೆ ಆಗಿತ್ತು. ನಾನು ಒತ್ತಿನ ಕೋಣೆಗೆ ನೀರು ತರಲು ಹೋದಾಗ ಪ್ರಶ್ನೆ-ಪತ್ರಿಕೆಯನ್ನು ಹಾರಿಸಿದ್ದ. ನನಗೆ ತಿಳಿಯಲಿಲ್ಲವೆಂದು ಪಾಪದ ಹುಡುಗ ಭಾವಿಸಿದ್ದಾನೆ. ನಾನು ಸುಮ್ಮನಿದ್ದೆ...ಚೆನ್ನಾಗಿ 'ಮಾರ್ಕುಗಳನ್ನೂ ಕೊಟ್ಟಿದ್ದೆ'.

ಕೃಷ್ಣ ಭಟ್ಟ ತೆಪ್ಪಗೆ ಕುಳಿತ. ಅವನಿಗೆ ಪ್ರೊಫೆಸರರು ಇಷ್ಟೊಂದು ಮೃದು ಸ್ವಭಾವದವರು ಎಂದು ತಿಳಿದಿರಲಿಲ್ಲ. ಬೇರಾರಾದರೂ ಆಗಿದ್ದರೆ, ಅವನಿಗೆ ಕಾಲೇಜಿನಿಂದ ಗಡಿಪಾರು ಆಗುತ್ತಿತ್ತು. ನನಗೆ 'ಡೊಂಕ'ನ ಸೂಕ್ಷ್ಮ ಬುದ್ಧಿಯ ಪರಿಚಯ ಚೆನ್ನಾಗಿ ಆಯಿತು.

ಪ್ರೊಫೆಸರರು ಮಾತೆತ್ತಿದರು:-'ಅದೆಲ್ಲ ಹೋಗಲಿ, ನಿಮಗೆ ನಿಜವಾಗಿಯೂ ನೀರು ಬೇಕೆ?' ನನ್ನ ಭಾವ 'ಬೇಡ' ಎಂದು ಸೋತವರ ನಗೆ ನಕ್ಕ. ಅವನಿಗೆ 'ಡೊಂಕರು' ಚೆನ್ನಾಗಿ ನೀರು ಕುಡಿಸಿದ್ದರು.

ಬಳಿಕ ನನ್ನ ಪರಿಚಯ ಮಾಡಲು ಆರಂಭಿಸಿದರು.

ಪರಿಚಯ ಮಾಡಿಕೊಳ್ಳುತ್ತ ಅವರ ಉಗುರುಗಳು ಹಲ್ಲಿಗೆ ಹೋದುವು. ಹಲ್ಲಿನಿಂದ ತೆಗೆದುದನ್ನು ಅವರು ಒಂದಿಷ್ಟೂ ಹಾಳು ಮಾಡಲಿಲ್ಲ. ಅದು ಮೊದಲೇ ಹೋಗಬೇಕಾಗಿದ್ದ ಸ್ಥಳಕ್ಕೆ ಹೋಯಿತು. ನನಗಂತೂ ಅದನ್ನು ನೋಡಿ ವಾಂತಿ ಬರುವಂತಾಯಿತು. ಬಹುಶಃ ಅವರ ಒಂದುವರೆ ಇಂಚಿನ ಉಗುರನ್ನು ನೋಡಲು ಕೂಡಲೆ ನನ್ನ ಮನಸ್ಸು ಹರಿಯದಿರು ತ್ತಿದ್ದರೆ, ಈ ಅವಾಂತರವಾಗುವುದು ಖಂಡಿತವಿತ್ತೆಂದು ಕಾಣು ತ್ತದೆ. ಒಂದು ಪುಸ್ತಕ ಕಣ್ಣಿಗೆ ಬಿತ್ತು. ಸುಮಾರು ಐನೂರು ಪುಟಗಳದ್ದು—ಕೈಬರಹದ್ದು. 'ಕಪ್ಪೆಗಳ ಅಂಕೆ-ಸಂಖ್ಯೆಗಳು' ಎಂದು ಅದಕ್ಕೆ ಹೆಸರು ಹಾಕಲಾಗಿತ್ತು. ನನಗೆ ನಿನ್ನೆ ನನ್ನ ಭಾವ ಹೇಳಿದುದು ನೆನಪಾಯಿತು. 'ಅದೇನು ಸಾರ್, ನೋಡಬಹುದೇ?' ಎಂದು ಅವರ ಉತ್ತರಕ್ಕೂ ಕಾಯದೆ, ನಮ್ಮ ಮನೆಯ ಹೆಸರೂ ಇದೆಯೇ—ಎಂದು ಪರೀಕ್ಷಿಸಿದೆ. ನಮ್ಮ ಮನೆಯ ಬಾವಿಯಲ್ಲಿದ್ದ ಕಪ್ಪೆಗಳ ಅಂಕೆಗಳು ಅದರಲ್ಲಿ ದ್ದುವು. ಅದನ್ನು ಸರಿಯೋ ತಪ್ಪೋ ಎಂದು ನಾನು ಹೇಗೆ ಹೇಳಲಿ? ನಮ್ಮ ಮನೆಯಲ್ಲಿ ಬಾವಿಯಲ್ಲಿ ಎಷ್ಟು ಕಪ್ಪೆಗಳಿವೆ ಎಂದು ನನಗೇನು ಗೊತ್ತು?—ಬಳಿಕ ಅದನ್ನು ಮುಚ್ಚಿದೆ.

ನನ್ನ ಭಾವ 'ಇಗೊಳ್ಳಿ ಇದು ಚೆನ್ನಾಗಿದೆ' ಎಂದು ಅಣ ಕಿಸುವ ಕಣ್ಣುಗಳಿಂದ ಇನ್ನೊಂದು ಪುಸ್ತಕವನ್ನು ತೆಗೆದುಕೊಟ್ಟ. ತೆಗೆದು ನೋಡುತ್ತೇನೆ— ಅದರಲ್ಲಿ ಪ್ರತಿಯೊಂದು ಗೆರೆಯ ಅಡಿ ಯಲ್ಲಿ ಒಂದೊಂದು ಗೀಟು. ಅದೂ ಒಂದೇ ಒಂದು ಬಣ್ಣದಲ್ಲೆ? ಕಾಮನ ಬಿಲ್ಲಿನಲ್ಲೂ ಅಷ್ಟು ಬಣ್ಣಗಳಿರಲಾರವು. ಪ್ರೊಫೆಸರರು ಬೀಡಿಯೊಂದನ್ನು ಸೇದುತ್ತ ನನ್ನ ಮುಖವನ್ನು ನೋಡುತ್ತಿದ್ದರು.

'ಇದೇನು ಸಾರ್ ಪ್ರತಿಗೆರೆಯ ಅಡಿಯಲ್ಲೂ ಒಂದೊಂದು ಗೀಟು ಹಾಕಿರುವಿರಲ್ಲ?' ಎಂದು ಕೇಳಿದೆ.

'ಹಾಂ—ಅದೋ—ಒಮ್ಮೆ ಓದುವಾಗ ಒಂದು ಭಾಗ ಚೆನ್ನಾಗಿ ಕಂಡಿತು. ಇನ್ನೊಮ್ಮೆ ಓದುವಾಗ ಇನ್ನೊಂದು ಭಾಗ ಮುಖ್ಯವಾಗಿ ಕಂಡಿತು. ನೆನಪಿರಬೇಕೆಂದು ಕಂಡುದರ ಅಡಿಯಲ್ಲೆಲ್ಲ ಗೀಟು ಹಾಕಿದೆ'. ಪ್ರೊಫೆಸರ್ ಡೊಂಕರು ಬೀಡಿಯ ಕಡೆಯ 'ದಮ್ಮು' ಸೇದಿ:

'ಇನ್ನು ಒಂದಿಷ್ಟು ಹೊರಗೆ ಹೋಗೋಣವೆ?' ಎಂದು ಎದ್ದರು.

ಸರಿಯೆಂದು ನಾನೂ ಎದ್ದೆ. ಅವರ ಹಳಸಲು ಕಾಕೀ ಕೋಟು ಪುನಃ ಅವರ ಹೆಗಲಿನಿಂದ ನೇತಾಡತೊಡಗಿತು. ಒಂದು ಹರಕು 'ಶೂ'ವನ್ನು ಹಾಕಿಕೊಂಡರು. ಅಷ್ಟರಲ್ಲಿ ಅವರ ಕಣ್ಣಿಗೆ ನನ್ನ 'ಶೂ' ಬಿತ್ತು.

'ನಿಮ್ಮ 'ಶೂ' ಚೆನ್ನಾಗಿದೆ,' ಎಂದು ಹೇಳಿದರು. ಬೇರೆಯವರು ಹೇಳಿದ್ದರೆ ನನ್ನನ್ನು ತಮಾಷೆ ಮಾಡಿದುದೆಂದು ಆದರಲ್ಲೇ ಅವರಿಗೆ ಉತ್ತರ ಹೇಳುತ್ತಿದ್ದೆ—(ನನ್ನಿಂದ ಬಲ ಅವನಿಗೆ ಕಮ್ಮಿ ಇದ್ದಿದ್ದರೆ) ಆದರೆ ಡೊಂಕರು ತಮಾಷೆ ಮಾಡುವಂತೆ ಕಾಣಲಿಲ್ಲ. 'ಇಪ್ಪತ್ತೆರಡು ರೂಪಾಯಿ ಕೊಟ್ಟ ಕರ್ಮಕ್ಕೆ, ಹತ್ತು–ಹನ್ನೆರಡು ಸಲ ರಿಪೇರಿ ಮಾಡಿಸಿದೆ. ನೋಡಿ! ಇನ್ನು ಯಾರಾದರೂ ರಿಕ್ಷಾವಾಲನಿಗೆ ಇನಾಮು ಕೊಡಬೇಕು!' ಎಂದೆ. 'ಏನು ರಿಕ್ಷಾವಾಲನಿಗೆ ಇನಾಮೆ? ಇಷ್ಟು ಒಳ್ಳೆಯ 'ಶೂ'ಗಳನ್ನು?......ನನಗೆ ಕೊಟ್ಟಿದ್ದರೆ ನಾನಾದರೂ ಹಾಕಿಕೊಳ್ಳಬಲ್ಲೆ...' ಅವರು ಆಶ್ಚರ್ಯದಿಂದ ಹೇಳಿದರು. ನನಗೆ ಅದನ್ನು

ಕೇಳಿ, ಅವರಿಗಿಂತಲೂ ಹೆಚ್ಚು ಆಶ್ಚರ್ಯವಾಯಿತು... ಅದಕ್ಕಿಂತಲೂ ಹೆಚ್ಚು ದುಃಖವಾಯಿತು.

ನಾವು ಮಹಡಿಯ ಮೆಟ್ಟಲಿಳಿದೆವು. ಡೊಂಕರು ಮುಂದುವರಿಸಿದರು: 'ನನಗೆ ನೋಡಿ, ಈ ಅನಾವಶ್ಯಕ ಖರ್ಚು ಮಾಡುವುದನ್ನು ಕಂಡರೆ ಹಿಡಿಯಲಾರದಷ್ಟು ಸಿಟ್ಟು ಬರುತ್ತದೆ. ಹಣ ಇದ್ದ ಮಾತ್ರಕ್ಕೆ ಹಾಳುಮಾಡಬೇಕೆ? ಒಂದು ಇಜಾರು, ಒಂದು ಕೋಟು ಇದ್ದರಾಯಿತಪ್ಪ. ಐವತ್ತು ಬೇಕೆ?' ಅವರು ಕಾಸು ಖರ್ಚು ಇಲ್ಲದೆ ಹೇಗೆ ಪುಸ್ತಕ ಸಂಗ್ರಹಿಸುತ್ತಿದ್ದರು—ಎಂದು ಹೇಳುತ್ತಿದ್ದರು. ಆದರೆ ನನಗೆ ಅವರ ಕೋಟಿನ 'ಪರಿಮಳ'ದಿಂದ ತಲೆಗೆ ಒಂದೂ ಹೋಗಲಿಲ್ಲ. ಸ್ವಲ್ಪ ದೂರ ಹೋಗುವಾಗ ಒಂದು ಕವಲು ದಾರಿ ಬಂತು. 'ನಾವು ಹೋಗುತ್ತೇವೆ ಸಾರ್!' ಎಂದೆ.

'ಆಗಲಿ. ನಿಮ್ಮಂಥವರಿಗೆ ನನ್ನೊಡನೆ ಬರಲು ನಾಚಿಕೆಯಾಗುತ್ತದೆ; ಗೊತ್ತು ನನಗೆ!' ಎಂದು ಅಪ್ಪಣೆ ಕೊಟ್ಟರು. ಅವರ ನುಡಿಯಲ್ಲಿ ಒಂದು ವಿಚಿತ್ರ ತೆರನಾದ ನೋವು ಹಣಿಕಿ ಹಾಕಿತ್ತು. ನಾನು 'ಹಾಗೇನಿಲ್ಲ' ಎಂದು ಬಾಯಿ ಹಾರಿಸಿ, ನಾವು ಕವಲು ದಾರಿ ಹಿಡಿದೆವು. ಡೊಂಕರು ಅದೇ ದಾರಿಯಲ್ಲಿ ಮುಂದುವರಿದರು.

ಅಷ್ಟರಲ್ಲಿ 'ನೋಡಿದಿರಾ, ಪಿಯೆಚ್‌ಡಿ. ಡೊಂಕರು ಕೂದಲೆಣಿಸಿದ ಪಾದ್ರಿಗಳು ಬರುತ್ತಾರೆ'—ಭಾವ ದೂರದಲ್ಲಿ ಬರುತ್ತಿರುವ ನುಣ್ಣಗೆ ಮಿಂಚುವ ಸಾಣೆ ತಲೆಯ ಪಾದ್ರಿಯನ್ನು ತೋರಿಸಿದ.

ಬೇರೆ ಸಂದರ್ಭವಾಗುತ್ತಿದ್ದರೆ ನನಗೆ ನಗು ಬರುತ್ತಿ

ತ್ತಿಂದು ಕಾಣುತ್ತದೆ. ಆದರೆ 'ಪಿಯೆಚ್ ಡಿ. ಡೊಂಕ'ನನ್ನು ಕಂಡು ಮನಸ್ಸು ಏಕೋ ವ್ಯಸನದಿಂದ ಕೂಡಿತ್ತು. 'ಬಾವಿ ಯೊಳಗಣ ಕಪ್ಪೆ'ಗಳನ್ನು ಬರೆಯಲು ಇವನಲ್ಲದೆ ಬೇರಾರು ಸಮರ್ಥರು? ಎಂದು ಯೋಚಿಸುತ್ತ ಬರುತ್ತಿದ್ದೆ.

ಕೃಷ್ಣ ಕೇಳಿದ: 'ಏನು ಭಾವ, ಮಾತಾಡದೆ ಸುಮ್ಮನೆ ಹೋಗುತ್ತಿರುವಿರಲ್ಲ?' 'ಏನು ಹೇಳಲಿ ಕೃಷ್ಣ!' ಎಂದೆ ನಾನು.





ಶ್ರೀ| ಕೈಂತಜೆ ಗೋವಿಂದ ಭಟ್ಟರು ಕನ್ನಡ ಸಾಹಿತ್ಯ ಪ್ರಪಂಚಕ್ಕೆ ಹೊಸಬರಲ್ಲ. ಬಿಡುವಿಲ್ಲದ ವಕೀಲ ವೃತ್ತಿಯಲ್ಲಿದ್ದರೂ, ಸಾಹಿತ್ಯಾಭಿಮಾನಿಗಳೂ, ಲೇಖಕರೂ ಆಗಿದ್ದಾರೆ. ಇವರು ಉತ್ತಮ ಕಥೆಗಾರರು. ಕೇವಲ ಕಥೆಗಾರರಲ್ಲದೆ ವ್ಯಕ್ತಿ ಚಿತ್ರ, ವ್ಯಂಗ ಬರಹ ವಿಚಾರಪರಿಪೂರ್ಣ ಲೇಖನ, ಕಾನೂನಿಗೆ ಸಂಬಂಧಪಟ್ಟ ಟಿಪ್ಪಣಿಗಳನ್ನು ಬರೆದು ಕನ್ನಡ ಜನತೆಗೆ ಪರಿಚಿತರಾಗಿರುವರು.

ಈಗಾಗಲೆ ಅವರ 'ಕಾಳಿಗೆ ಕಾಣಿಕೆ'ಯೆಂಬ ಕಥಾಸಂಗ್ರಹವು ಪ್ರಕಟವಾಗಿ ಜನಪ್ರಿಯವಾಗಿದೆ. 'ಚಿರಪರಿಚಿತರು' ಅವರು ಬರೆದ ಕೆಲವು ವ್ಯಕ್ತಿಚಿತ್ರಗಳ ಸಂಗ್ರಹ.

